# ಕಾವ್ಯವೇದನೆ



## ಪ್ರೇಮಾರಾಧನೆ



## ಆತ್ಮಶೋಧನೆ

Ideals are dangerous things.
Realities are better.
They wound, but they are better.

—*Oscar Wilde*

ವಿ. ಜಿ. ಭಟ್ಟ

ಪರ್ಣಕುಟಿ ಗ್ರಂಥಮಾಲೆ
ಧಾರವಾಡ

ಕಾವ್ಯವೇದನೆ—೧

# ಪ್ರೇಮಾರಾಧನೆ

( ಪ್ರಣಯ ಗೀತಗಳು )



' ದಾಂಪತ್ಯ ಜೀವನ ' ದ ಕೃಪೆಯಿಂದ

# ಪರಿವಿಡಿ

# ಉಪೋದ್—ಘಾತ

ಪೋಲಿ ಭಟ್ಟನಿಗು ಕಡಗ ಹಿಡಿಯಿತೇ
ಪ್ರಣಯವೆಂಬ ಹುಚ್ಚು
ಇವಗೆ ಬಲೆಬೀಸಿ ಹಿಡಿದ ಹೆಣ್ಣಿನಾ
ಬಿಗುಡು ಬಹಳ ಹೆಚ್ಚು

ಎಂದು ನಗುತೆ ನಾ ತಿರುವಿದೆನೀತನ
ಪ್ರಣಯ ಗೀತಗಳ ಕಡತ
ಅಯ್ಯೊ ! ಅಯ್ಯೊ ! ಪಾಷಂಡಿಯೇನನಿದು
ಮಾಡಿಬಿಟ್ಟನೋ ಘಾತ !

ಪ್ರಣಯ ದೇವತೆಯ ಮಂದಿರದಲಿ ಬಿಡ
ಬಹುದೇ ಮಂಗನ ತಂದು
ಪಿಂಗಾಣಿಯಂಗಡಿಗೆ ತಂದು ಬಿಟ್ಟಂತೆ
ಹುಚ್ಚು ಹೋರಿಯೊಂದು ?

ಪ್ರಣಯದೇವತೆಯ ಮೈಯ ಮೇಲಿನಾ
ಹಾರಗಳನು ಹರಿದು
ಅವಳ ಮುಚ್ಚಿರುವ ಶಿಲ್ಪವೈಭವದ
ಹೊನ್ನ ಕವಚವೊಡೆದು

ರನ್ನಹರಳ ಕಣ್ಣುಗಳ ಕಿತ್ತು ತುಟಿ
ಗೆಂಪನುಜ್ಜಿ ತೆಗೆದು
ಪುಷ್ಯರಾಗದಾ ತಿಲಕ ಕಳೆದು ಸಿಂ-
ಗಾರ ಮಾಡಿ ಬರಿದು

ಮೂಲ ಬಿಂಬವನು ತೋರಬಹುದೆ ಭ-
ಕ್ತರಿಗೆ ಹೀಗೆ ಭಂಡ !
ಕಲ್ಲಿನೊರಟು ಮೂರ್ತಿಯನು ಕಂಡ ಮೇ-
ಲೆಲ್ಲಿ ಭಕ್ತಿ ಬಂಧ ?

ಯಾರು ತಹರು ನೈವೇದ್ಯ ಯಾರು ತಹ-
ರಿನ್ನು ಹಣ್ಣುಕಾಯಿ ?
ಪ್ರಣಯ ದೇವತೆಯ ನಗ್ನ ರೂಪವನು
ಹಾಡಲಾರ್ಗೆ ಬಾಯಿ ?

ಎಂದು ಕೊರಗಿದೆನು, ಅತ್ತು ಮರುಗಿದೆನು
ದೇವತೆಯಾ ಪೂಜಾರಿ
ಇನ್ನು ಮೂರ್ತಿಯಿಂದೇನು ಎಂದು ಮಡ-
ಗಿದೆನು ಹೊಳೆಗೆ ತೂರಿ

—ಸಾ. ನೆಂ

# ಪ್ರಣಯ ಗೀತಗಳು

## ಈ ಊರಿನ ಇವಳು

ಇದೇ ಊರಿನಲಿ ಇರುವುದಾಪರೆ
ಇವಳ ಬೆನ್ನ ಬಿಟ್ಟೇನೆ । ನಾ-
ನಿವಳ ಬೆನ್ನ ಬಿಟ್ಟೇನೆ ?

ಈ ಊರಿಗಾನು ಹೊಚ್ಚಹೊಸಬ
ಯಾರೂ ಅರಿಯರೋ ಇಲ್ಲಿ ನನ್ನ ಹುಚ್ಚ ಕಸಬ
ಅತ್ತಿತ್ತ ನೋಡುತಾ ಹೋಗಿ
ಭುಜ-ಭುಜಾ ತಾಗಿ
ತಪ್ಪಾಯ್ತು ಅನ್ನದೇ ಬಿಟ್ಟೇನೇ । ನಾ-
ನಿವಳ ಬೆನ್ನ ಬಿಟ್ಟೇನೇ ?

ಹಂ. ಒಂದೇ ಮಾರು-ಮೊಳ-ಸನಿಯ
ಆದೇನೇ ನಾನು ಇವಳಿನಿಯ ?
ಏನೇ ಆಗಲಿ ಮಾತನಾಡಿಸುವೆ
—ಅರರೆ ! ಇವಳು ಅವಳೇ
ಈ ಊರಿನಿವಳು ಆ ಊರಿನವಳೆ
ಅವಳೇ !

# ಗೋಡೆ

ಅವರ ನನ್ನ ಮನೆ ನಡುವೆ ನಿಂತಿಹುದು
ಇಂಚಿನಗಲ ಗೋಡೆ । ಒಂದು
ಇಂಚೇ ಅಗಲಗೋಡೆ
ಗೋಡೆ ಇಲ್ಲವೇ ಇಲ್ಲ ಅನಿಸುವದು
ಹೀಗೆ ತಿಳಿದುನೋಡೆ
ಹೀಗೆ ಅಳೆದುನೋಡೆ

ಮೂರು ಮೂರುವರೆ ವರುಷವಾಯ್ತು ನಾ-
ನಿಲ್ಲಿ ಬಂದು ನೆಲಸಿ
ಅವರ, ನನ್ನ ಮನೆಗೊಂದೆ ಅಗಸ ಹಾ-
ಲವಳು ಒಂದೆ ಕೆಲಸಿ
ಅವರ ಮನೆಯವರು ಮಾತನಾಡಿಸರು
ನನ್ನ ಒಂದು ಸಲವೂ
ಯಾಕೊಯೇನೋ ಮೂಡದಿದೆ ನನಗೆ ಅವ-
ರಲ್ಲಿ ಇನಿಸು ಒಲವೂ

ನನ್ನ ಒಂಟಿ ಜೀವನದ ದುಕ್ಕ ನೆರೆ-
ಮನೆಯ ಸವಿಯ ಸುರುಕು
ಹಿಗ್ಗು ಮುಗ್ಗು ಮಾಡಿಹವು ಗೋಡೆಯನು
ಬಂತು ಅದಕೆ ಬಿರುಕು

ನನ್ನ ಮನೆಯಲ್ಲೂ ಅವರ ಮನೆಯಲ್ಲೂ
ಹಳೆಯ ಮುದುಕಿ ತಾಯಿ
ಅಥವ ಈ ಎರಡು ಮನೆಗಳಲ್ಲಿಯೂ
ಎರಡು ಗಂಡು ನಾಯಿ
ಇರುತಲಿದ್ದರಿಂದಾದರೊಮ್ಮೆ ತೆರೆ-
ದಾಡುತಿತ್ತು ಬಾಯಿ !

ಗೋಡೆಯಾಚೆಗಿರುತಿದ್ದರೊಂದು ಹರೆ-
ಹೊಮ್ಮಿ ಬಂದ ಹುಡುಗಿ
ಗೋಡೆ ಬೀಳದೆಯೆ ನಮ್ಮ ಎದೆಯ ಕರೆ
ಕೆಮ್ಮಿನಿಂದ ನಡುಗಿ—
ಏನು ನಿಲ್ಲುತಿತ್ತೇ ?
ನಡುವೆ ಇರಲೆಬೇಕಾದ ಗೆಳೆತನವ
ಹೀಗೆ ಕೊಲ್ಲುತಿತ್ತೇ ?

## ಅವಳನುಳಿಸುವ ಸುಳ್ಳು

ಇಲ್ಲಿ ಇರು ನನ್ನ ಎದೆಯೆ ಅಲ್ಲಿ ಹೋಗಿಬರುವೆನು
ನೋಯುತಿರುವ ಸಾಯುತಿರುವ
ಅವಳನುಳಿಸಿ ಬರುವೆನು

ನನ್ನ ಕಣ್ಣ ಚೆಂದಕಂಡಳೆಂದೆ ಮುಕ್ಕ ಮೊಳೆತಿತು
ನನ್ನ ಪ್ರೀತಿಯಾಳದಲ್ಲಿ ಅವಳ ಸುಖವು ಮುಳುಗಿತು

ಅವಳಲೆನ್ನ ಪ್ರೀತಿ ಬೆಳೆಯಿತೆಂದೆ ಉಸಿರು ಉಸಿರಿಗೂ
ಅವಳೆದೆಯಲಿ ಸಾವು ಸುಳಿದು ಸೊಗ ಸಿಗದಿದೆ ಹೆಸರಿಗೂ

ಓ ಹೃದಯವೆ, ಅವಳುಳಿಯಲಿ
ಅಂತೆ ಹೇಳಿ ಸುಳ್ಳನು
ಅವಳ ರೊಚ್ಚಿಗೆಬ್ಬಿಸುವೆನು
" ಪ್ರೀತಿಸೆ ನಾ ನಿನ್ನನು "

---

# ಬಣ್ಣ ಬಣ್ಣದ ಚೆಲುವಿನೊಡಲ ಪಾಪ

ಬಣ್ಣ ಬಣ್ಣದೊಂದು ಚೆಲುವು
ಕಣ್ಣಮುಂದೆ ಸುಳಿಯಿತು
ಪೆಚ್ಚು ಜೀವವೊಂದು ಅದರ
ಪುಚ್ಛ ಕಂಡೆ ನಲಿಯಿತು

ಕಣ್ಣು ಹೊರಳಲಿಲ್ಲ. ಕರೆದ-
ಹಾಗೆ ಚೆಲುವು ಬಂದಿತು
ನನ್ನ ಬಾಳು ನಿನ್ನಿಂದ
ಸಾರ್ಥಕವಿಂದೆಂದಿತು.

ಪೆಚ್ಚು ಜೀವವಾ ಚೆಲುವಿನ
ಪುಚ್ಛ ಹಿಡಿದೆ ಆಡಿತು
ಅದರೊಡಲಿನ ಪಾಪ ಬಂದು
ಇದಕೆ ತನ್ನ ತಂದೆಯೆಂದು
ನಾಮಕರಣ ಮಾಡಿತೋ
ನಾಮಕರಣ ಮಾಡಿತು

---

# ಒಂದು ಪ್ರಣಯ ಗೀತ

" ನಿನಗೆ ಜೀರ್ಣವಾಗಬಹುದೆ
ಒಂದು ಹರಕು ಹೋಳಿಗೆ ?
ಸಾಗಬಹುದೆ ನೀನನ್ನೊಬ್ಬ-
ಳಿಂದೆ ನನ್ನ ಸೀಳಿಗೆ ?
ಸುತ್ತು ಮಾತನಾಡಲೇಕೆ
ಜೋಡಿಯಾಗಬಹುದೆ ಮೇಕೆ
ನೀನು— ಈಗೂಳಿಗೆ ?

ಸಾಧಾರಣ ನಿನ್ನ ರೂಪ
ಆದರೆ ನಿನಗೊಲಿದ ಭೂಪ
ಹಣವ ಸುರಿದು ಮುದ್ದಿಗೆ
ಸೋಲಬೇಕು
ಮಾತು ಸಾಕು
ಬಯಸೆ ನಿನ್ನ ಮುದ್ದಿಗೆ.

ನೋಡು ನಿನಗೆ ಕಾಮಳೆ
ಹಿಡಿದ ಹಾಗೆ ಕೋಮಲೆ
ತೋರುತಿಹುದು
ಸಾರುತಿಹುದು
ಅದನೆ ನಿನ್ನ ದೇಹವು
ನಿನ್ನ ಕೊಲ್ಲಬಹುದು ಮಾಂಸ
ದೀನನನ್ನ ದಾಹವು "

## ಪ್ರಣಯ ಗೀತಗಳು

“ ನಾನು ನಿನಗೆ ಸೋತು ಬಂದೆ
ಉಳಿವು ನಿನ್ನ ಪ್ರೀತಿಯಿಂದೆ
ಒಲ್ಲೆ ಎನಲು ಮರಣವು
ನನ್ನೊಳಿರಲಿ ಕರುಣವು ”

“ ಇಂಥ ದೇಹದಲ್ಲಿ ಪ್ರೀತಿ
ಎಂದೆಂದೂ ಬೀಳದು
ಹುಚ್ಚು ಹಿಡಿದ ಭಾವನೆಯೂ
ಬುದ್ಧಿಯನ್ನು ಹೂಳದು ”

“ ನಾನು ಬಂದೆ ನಿನಗೆ ಸೋತು
ಏಕೆ ದೇಹದೊಂದೆ ಮಾತು ?
ಅಮರವಿಹುದು ಪ್ರೀತಿಯು
ನಂದದಂಥ ಜ್ಯೋತಿಯು ”

“ ಪ್ರೀತಿಯಿದ್ದರೇನು ಅಮರ ?
ದೇಹದಿಂದೆ ಬಾಳ ಸಮರ
ಇರಲಿ ಅಮರ ಪ್ರೀತಿಯು
ವೇದಾಂತವನೆತ್ತಬೇಡ
ಬಾಳಲಾರೆ ನನ್ನಕೂಡ
ನೆತ್ತರಿರದ ನಿನ್ನ ದೇಹ
ಕತ್ತಲೆಯನೆ ಬೀರುವಂಥ
ಹೊತ್ತಿಹೋದ ಜ್ಯೋತಿಯು ”

“ ಸಾವೆ ನನಗೆ ಗತಿಯು ಗೆಳೆಯ
ನೀನೆ ಹೀಗೆ ಅಂದರೆ ”

" ನೋಡು ಗೆಳತಿ ಪ್ರೀತಿ ಅಮರ
ದೇಹದೊಂದೆ ತೊಂದರೆ
ನಾನು ನಿನ್ನ ವರಿಸಬಹುದು
ನೀನು ಬೆಳೆದು ಬಂದರೆ
ಕೊಬ್ಬಬಹುದು ನೀನು ವಿನಾ
ಹಸಿ ಕಡಲೆಯು ತಿಂದರೆ ! "

" ನೋಡು ಗೆಳೆಯ ನನ್ನ ಗೆಳತಿ
ಮದುವೆಯಾದ ನಂತರೇ
ಎಮ್ಮೆಯಂತೆ ಬೆಳೆದಿರುವಳು
ನಾನು ಸಹಾ ಅಂತೆಯೇ
ಆಗಬಹುದು. ನನ್ನ ಹೀಗೆ
ಸೊರಗಿಸಿಹುದು ಚಿಂತೆಯೇ "

" ಬಹುದು ಗಿಹುದು ಎಂಬುದೆಲ್ಲ
ಗೆಳತಿ ಎಲ್ಲಿ ಖಾತ್ರಿಯು ?
ಕೆಲವು ಸಮಯ ತಡೆದು ನೋಡು "

.........................

" ಆಯಿತಲ್ಲ ರಾತ್ರಿಯು ! "

ಕಂಡು ಕಂಡು ಕ್ಷಮಿಸಿದನೋ
ಅವರನಾ ತ್ರಿನೇತ್ರಿಯು

---

# ಚೊಚ್ಚಲ ಮಣಿಕ

“ ಗೆಳತಿ, ನಮ್ಮೀ ಗುಟ್ಟು ನಾಕಿನ್ನು ನಾವೆಂದು
ಸಂಸಾರ ಹೂಡುವದು ಮದುವೆಯಾಗಿ ?”

“ ಗೆಳೆಯಾ, ತಾಯ್ತಂದೆಗಳು ಅನುಮತಿಯ ಕೊಡಬೇಕು
ನಮ್ಮ ಪ್ರೇಮದ ಕತೆಯು ಕಿವಿಗೆ ತಾಗಿ ”

“ ಹಾರು ಮಾತುಗಳಿಂದ ಸುದ್ದಿ ಮುಟ್ಟುವವರೆಗೆ
ನಾವು ಹೀಗೇ ಕದ್ದು ಕೂಡಬೇಕೇ ?
ನಾಳೆ ನಾನೇ ಹೋಗಿ ನಿನ್ನ ತಾಯ್ತಂದೆಗಳ
ಕೇಳಿ ಬರುವೆನು ನೀನು ಮಾತ್ರ ಜೋಕೆ ”

“ ಬೇಡ ಅಂತಹ ಕೆಲಸ ನನ್ನ ತಂದೆಯು ನಿನ್ನ
ಕೋಪದಲಿ ಬಯ್ಯಬಹುದು
ನಮ್ಮ ಪ್ರೇಮಕೆ ಇಲ್ಲದೊಂದು ಹೆಸರನ್ನಿಟ್ಟು
ನನ್ನ ಕುತ್ತಿಗೆಯನ್ನೆ ಕೊಯ್ಯಬಹುದು ”

“ ಹಾಗಾದರೇನು ನಾ ಮಾಡುವದು ? ಈ ರೀತಿ
ಕಳ್ಳತನವೆಲ್ಲಿ ತನಕ ?”
“ ನನ್ನ ತಾಯ್ತಂದೆಗಳಿಗೊಬ್ಬಳೇ ಮಗು ನಾನು ”
“ ಬಲ್ಲೆ ನೀನೇ ಅವರ ಮೊದಲ ಮಣಿಕ !”

" ಒಬ್ಬಳೇ ಮಗಳಾಗಿ ಅವಳ ಪ್ರಾಣವು ನಾನು
ತಡೆ. ತುಂಬುತಿಹುದೆನ್ನ ತಾಯ ಬಸುರು "
" ಅದರಿಂದ ನನಗೇನು ? ನನ್ನ ಜತೆಬರುವಿಯೋ "
ಇಲ್ಲವೋ ಎಂಬುದನು ಬೇಗ ಉಸುರು "

" ನನ್ನ ತಾಯ್ತಂದೆಗಳ ಪ್ರಾಣವೇ ನನ್ನಲಿದೆ "
" ಅದನು ನಾನೀಗಲೇ ಸೆಳೆದು ಬಿಡಲೆ ?"
" ಹಾಗಲ್ಲ ತಡೆ ನನ್ನ ತಾಯಿ ಹಡೆಯುವವರೆಗೆ "
" ಓಹೊ ಮರುಚಲ ಮಣಕ ಹುಟ್ಟಿದೊಡನೆ "

" ನಿನ್ನ ಜತೆಯೆಲ್ಲಿಗೂ ಓಡಿ ಬರುವೆ "
" ಲೇಸು. ಹುಟ್ಟಲಿ ತಮ್ಮ—ಗಂಡು ಕರುವೇ !"



# ಕೂಲಿ

ಇವಳ ಚೆಲುವು ನನ್ನೊಲವಿಗೆ
ಎಂದೊ ಹೇಗೋ ಸೋತಿದೆ
ಕೂಡಿಕೊಂಡು ಹೂತಿದೆ
ಬಯಸಿದಂತೆ ಕಾತಿದೆ

ಇವಳ ಚೆಲುವು ಬಲೆಗೆ ಸಿಲುಕಿ
ಬಂದಿತೊಂದು ಜೀವವು
ಅದಕೆ ನನ್ನ ಕೂಡ ಮಾತು
ಬೆಳಿಸುವೊಂದು ಹೇವವು

ನನ್ನ ಮಾತನೆಲ್ಲ ನಡಿಸಿ
ದಣಿದರೇನೇ ತಣಿವುದು
ನನ್ನ ಭಾವದಂತೆ ತಾಳ-
ಹಾಕಿ ಕುಣಿದೆ ಕುಣಿವುದು

ಇವಳ ಚೆಲುವಿನಿಂದ ನನಗೆ
ದೊರೆತನೊಬ್ಬ ಕೂಲಿಯು !
ಇರಲು ಇವಳ ಸುತ್ತ ನಮ್ಮ
ಪ್ರೀತಿಯೆಂಬ ಬೇಲಿಯು
ಕಿವುಡು ನಟಿಸುತಿರುವೆ ನಾನು
ಹಾರು ಮಾತ ಕೇಳಿಯೂ

ಇವಳ ಚೆಲುವು ಬಲೆಗೆ ಸಿಲುಕಿ
ಬಂದಿತೊಂದು ಜೀವವು
ಅದಕೆ ನನ್ನ ಕೂಲಿಮಾಡಿ
ದಣಿಯುವೊಂದು ಹೇವವು !

---

# ಮತ್ಸರ

ಇವಳ ಜತೆಗೆ ಕೈಬೀಸಿ ನಡೆದೆ ತೆಗೆ-
ದೆಲ್ಲ ಅಂಗಿ ಗುಂಡಿ
ಮೂರು ಸಂಜೆ ತಂಗಾಳಿ ! ಎದುರಿಗೇ
ಬಂದಳೊಂದು ಪುಂಡಿ.

ಅವಳು ನನ್ನೆದೆಯ ನೋಡೆ ಇವಳು ಮನ-
ದೊಳಗೆ ಆಗಿ ಚಂಡಿ
" ಕೆಟ್ಟಗಾಳಿ ಬೀಸಿಹುದು ನಿಮಗೆ ಆ-
ದೀತು ಥಂಡಿ-ಗಿಂಡಿ "

ಎಂದು ಹೇಳ ಹೇಳುತ್ತ ಹಾಕಿದಳು
ನನ್ನ ಅಂಗಿ ಗುಂಡಿ
ಕೆಟ್ಟ ಕಣ್ಣಿನಲಿ ನೋಡಿ ಇವಳನೇ
ನಡೆದಳೆಲ್ಲೊ ಪುಂಡಿ !

---

# ಕುರುಡು ಪ್ರೀತಿ

ಅಂಗೈ ಅಗಲದ ಕನ್ನಡಿಯೆದುರು
ಗಂಡನು ಕುಳಿತಿದ್ದ । ಅವಳ
ಗಂಡನು ಕುಳಿತಿದ್ದ.
ಹೊಸಾ ಹೆಂಡತಿಯದೆಂಥಾ ಚೆದುರು
ಮಾಡದೆಯೇ ಸದ್ದ
ಬಂದಳು
ಹಿಂಬದಿ
ಮಾಡದೆಯೇ ಸದ್ದ

ಮಡದಿ ಚೇಷ್ಟೆಯಲಿ ಬಳುಕಿ ಬಳುಕಿ
ಹೃದಯದಿ ತುಂಬಿದ ಪ್ರೀತಿಯು ತುಳುಕಿ
ಧೊಪ್ಪನಪ್ಪಿ ಹೌಹಾರಿದನು
ಅಂಗೈ ಅಗಲದ ಕನ್ನಡಿಯೆದುರು
ಕ್ಷೌರದ ಕತ್ತಿಯು ಮೂಗನು ಕೊರೆದು
" ಅಯ್ಯೋ ಅಯ್ಯೋ ಪ್ರೀತಿಯು ಕುರುಡು "
ಎಂದವ ಚೀರಿದನು !

---

# ಶೃಂಗಾರ ಕರಗಿತ್ತು ಕರುಣೆಯಲ್ಲಿ

ಹೆಣ್ಣ ನೋಡಲು ಬಂದ ಜೋಯಿಸರ ಮಗನನ್ನು
ಸ್ವಾಗತಿಸ ಹಬ್ಬಿತ್ತು ಅಡಿಗೆ ಕಂಪು
ಹೊಸ್ತಿಲಲಿ ಕಾಲಿಡುವ ಮುಂಚೆಯೇ ಕೇಳಿಸಿತು
ಎದುರು ಕಿಡಿಕಿಯ ಹಿಂದೆ ಬಳೆಗಳಿಂಪು

ಬಡಿಸ ಬಂದಾ ವಧುವ ಕೈತಾಗಿ ಮೈನವಿರಿ
ಮುಂಗೈಯವರೆಗು ನೋಡಿದನು ಕದ್ದು
ಕೈಕಾಲ ಕಂಡೆ ತರ್ಕಿಸಿದ ಜೋಯಿಸರ ಮಗ
' ಇರಬೇಕು ಇವಳ ಮೊಗ ಬಹಳ ಮುದ್ದು ! '

ಕಲ್ಪನೆಯ ಶೃಂಗಾರ, ಎದುರು ಷಡ್ರಸ ಧಾರೆ
ಕಾಣಲೆಳಸಿದ ನುಂಗಿದಷ್ಟು ಸಾರೆ

ನೀರಕುಡಿಯುವ ನೆವದಿ ಗೋಣ ಮೇಲೆತ್ತಿದನು
ಮತ್ತೊಂದು ಹಿರಿ ಚೆಲುವು ಕಣ್ಣ ಬಿತ್ತು
ದುಂಡು ಮೊಗ. ಕಂದಿಹುದು. ಹಣೆಗೆ ಕುಂಕುಮವಿಲ್ಲ
" ಅಪಶಕುನ ! ಇಲ್ಲೇಕೆ ಇಂಥ ಹೊತ್ತು ?"—

ಅಬ್ಬರಿಸಿದನು ಕಂಡು ಹೆಗಡೆ ಸೊಸೆ ವಿಧವೆಯನು
ಶೃಂಗಾರ ಕರಗಿತ್ತು ಕರುಣೆಯಲ್ಲಿ
ಹೆಣ್ಣ ನೋಡಲು ಹೋದ ಜೋಯಿಸರ ಮಗ ಬಂದ
ಮಾಸದಿದೆ ಹಿರಿ ಚೆಲುವು ಸ್ಮರಣೆಯಲ್ಲಿ

---

# ಪೌರುಷ

“ ನನ್ನ ಬೆನ್ನಿಗೆ ಬೀದಿ ಬೀದಿಯಲಿ ಬರುವವನೆ
ನಿನಗೆ ನಾನೆಂದಿಗೂ ಒಲಿಯಲೊಲ್ಲೆ
ಪ್ರೀತಿ ನಾಯಿಯ ಹಾಗೆ ಅಂಗಾಲ ಮೂಸಿದರೆ
ಅದಕೆ ಉಡುಗರೆ ಕಾಲ ಬಳಿಯ ಕಲ್ಲೇ ”

“ ಧಿಕ್ಕರಿಸುವೆಯೆ ಹೆಣ್ಣೆ ? ಲೇಸು ನೋಡೇ ಬಿಡುವೆ
ಇದೊ ಶಪಥ ತೊಟ್ಟಿರುವೆ ಕೇಳು ಕೇಳು
ಮೂರು ತಿಂಗಳಿನಲ್ಲಿ ನಿನ್ನ ಕೈಹಿಡಿದೆಳೆದು
ಮಂಟಪಕೆ ತಾರದಿರೆ ಆಗ ಹೇಳು ”

* * *

ಅಂತಃಪಟವು ಸರಿದು ಮಾಲೆ ಕೊರಳಿಗೆ ಬರಲು
“ ಹೇಗಾಯಿತೇ ನೀರೆ ನನ್ನ ಮಾತು ?
ಗಂಡಸರು ಕೆರಳಿದರೆ ಲೋಕಕೇ ತಳಮಳವು
ನನ್ನ ಬೆನ್ನಿಗೆ ಬಂದೆ ನೀನೆ ಸೋತು ! ”

* * *

ನಿಮ್ಮ ಕೆಣಕಿದ ಹೊರತು ಮನೆ ಮಕ್ಕಳಿನಗೆಲ್ಲಿ ?
ಅಂತೆಯೇ ನುಡಿದೆ ನಾನಂತು ಅಂದು
ಈ ಮಗುವು ಬೆಸೆದಿರಲು ನಮ್ಮೆದೆಯ ‘ ನಾ ಬಾಲ-
ವಿಧವೆಯಿದ್ದೆನು ’ ಹೇಳದೇನು ಇಂದು ?

---

# ಕೊನೆಯ ದರ್ಶನ

" ಇದು ಕೊನೆಯ ದರ್ಶನವು ಇಕೊ ನನ್ನ ಕಾಣಿಕೆಯು
ಮುಡಿದ ಹೂವೊಂದ ಕೊಡು ನೆನಪಿಗಾಗಿ
ನಿನ್ನೊಡನೆ ಬಾಳುವದು ಬರೆದಿಲ್ಲ ಹಣೆಯಲ್ಲಿ
ಇಂದು ಪರಸತಿ ನೀನು. ನಾ ವಿರಾಗಿ "

" ಮೆಲ್ಲಗುಲಿ; ಮಲಗಿರುವ ಪತಿಗೆ ಕೇಳಿಸಬಹುದು
ಹುಟ್ಟಿದೆನು ನಾನೇಕೊ ಹಾಳು ಹೆಣ್ಣು
ತಾಯ್ತಂದೆ ಮಾರಿದರು ನನ್ನ ಈ ದೇಹವನು
ಮನವಿರದೆ ತಾಯಾದೆ: ಬಾಳು ಮಣ್ಣು.

" ಆ ಸಂಜೆ ಗುಡಿಯಲ್ಲಿ ನಿನಗರ್ಪಿಸಿದೆ ನನ್ನ
ದೇವರೇ ಸಾಕ್ಷಿ ನಮ್ಮೊಲವಿಗೆಲ್ಲ
ಏನೇನು ಬರೆದಿಹುದೊ ಈ ಹಾಳು ಹಣೆಯಲ್ಲಿ
ಹುಟ್ಟಿಸಿದ ಪರಮಾತ್ಮನೊಬ್ಬ ಬಲ್ಲ "

" ಕೈಮೀರಿಹುದು ವ್ಯರ್ಥ ಅತ್ತತ್ತು ಫಲವೇನು ?
ಮುಡಿದ ಹೂವೊಂದ ಕೊಡು ನೆನಪಿಗಾಗಿ
ಬಂದಂತೆ ಜೀವನವ ಎದುರಿಸದೆ ಗತಿಯಿಲ್ಲ
ಸುಖಿಯಾಗು. ನೋಡು ನಾನಾದೆ ಯೋಗಿ "

" ಗಂಡಸರ ಎದೆಗಟ್ಟಿ. ಅವರು ಸೈರಿಸ ಬಹುದು
ಹೆಣ್ಣೆದೆಯ ತಳಮಳದ ಮಾತೆ ಬೇರೆ "
" ಹೆಣ್ಣಾದರೂ ಮನವ ಗಟ್ಟಿಮಾಡಲೆಬೇಕು
ಹೇಳಿಲ್ಲವೇ ಹಿಂದೆ ನೂರು ಸಾರಿ ? "

" ಮನೆಯವರು ಹಾಸಿಗೆಯ ಹಿಡಿದಿಹರು ಬಲವಾಗಿ
ಏನು ಅವಸರ ನಿನಗೆ ? ಸ್ವಲ್ಪ ನಿಲ್ಲು
ನೀನು ಹೇಳಿದ ಹಾಗೆ ಬಹಳ ದಿವಸಗಳಿಂದ
ಮಾಡಿಕೊಳ್ಳುತ್ತಿರುವೆನೆದೆಯ ಕಲ್ಲು.

" ಮನೆಯವರು ಹಾಸಿಗೆಯ ಹಿಡಿದಿಹರು ಬಲವಾಗಿ
ವೈದ್ಯ ಕೈ ಬಿಟ್ಟಿರುವ; ಆಸೆಯಿಲ್ಲ.
ಬೈರಾಗಿಯಂತೇಕೆ ನೀನೀಗ ಹೊರಡುವದು ?
ಮಾಡಿರುವೆ ಎದೆಯ ನಾ ಬಿರುಸು ಕಲ್ಲ

" ಬೈರಾಗಿಯಾಗದಿರು ಹೆಚ್ಚುವದು ಈ ದುಕ್ಕ
ಈ ಊರಿನಲ್ಲಿ ಇರು ಇಂದು ರಾತ್ರಿ
ದೂರಿಂದ ಬಂದಿರುವೆ. ವಿಶ್ರಮಿಸು. ಇಕೊ ರೊಕ್ಕ
ವೈದ್ಯನೆಂದುದೆ ಆಗಬಹುದು ಖಾತ್ರಿ. "

---

# ಒಲಿದು ಕೆಟ್ಟೆ

ಒಲಿದು ಕೆಟ್ಟೆನಿದೊ ನಿನಗೆ ಪ್ರಿಯ
ನಿನಗೆ ಅಂಟಿಹುದು ಘೋರ ಕ್ಷಯ.

ಗೊತ್ತಿದ್ದರೆ ನಿನಗಿದೆ ಈ ರೋಗ
ತಪ್ಪಿಸುತಿದ್ದೆನು ಈ ಸಂಯೋಗ
ಅಯ್ಯೊ ಒಲಿದು ಕೆಟ್ಟೆ

ಕೂಡಿದ ಮನಗಳ ಹರಿಯುವುದಾಗ
( ಬರೆದಿಹುದೇ ವೈಧವ್ಯದ ಯೋಗ ? )
ಮಸಣದಿ ಬಾಳ್ ಬಟ್ಟೆ
ಅಯ್ಯೊ ಒಲಿದು ಕೆಟ್ಟೆ

ಸಾವಿತ್ರಿಯ ಸತ್ವವು ನನಗಿಲ್ಲ
( ಸತ್ಯವಾನನೂ ನೀನಲ್ಲ )
ಓ ನಲ್ಲ
ವ್ಯರ್ಥ ಒಲಿದು ಕೆಟ್ಟೆ
ಮಸಣದಿ ಬಾಳ್ ಬಟ್ಟೆ

---

## ಪ್ರೀತಿ ಸಾಲದು

ನಾವು ಕೂಡಿದೀ ಜೀವನ ಸಾಗಲು
ಸಾಲದು ಸಖಿ ಬರಿ ಪ್ರೀತಿ
ಬದುಕಿನ ಉಸಿರೇ ಇದು ಎನಲಾರೆನು
—ಅಸ್ತಿತ್ವದ ಘನ ನೀತಿ

ಒಂದು ಖಂಡಿ ನಿಜ ಪ್ರೀತಿಯ ಕೊಟ್ಟರೆ
ಸಿಗುವದೆ ವಾರದ ' ಸೀದಾ ' ?
ಮನೆಯ ಮಾಲಿಕನ ( ಅವನ ಮಗಳನೂ )
ಪ್ರೀತಿಸಿ ನೋಡಿದೆ ರಾಧಾ—

ಅವನು ಆದರೂ ಬಾಡಿಗೆ ಕೊಡಲೇ-
ಬೇಕೆಂಬನು ಪ್ರತಿ ಮಾಸ
ಪೇಟೆಯಲಂತೂ ಮಾಡರು ಯಾರೂ
ನಮ್ಮೊಲವಿನ ಖಾಯಾಸ

ಕಣ್ಣಿದ್ದವರಿಗೆ ಬೆಳಕನು ನೀಡದು
ಇರುಳಲಿ ಪ್ರೀತಿಯ ಜ್ಯೋತಿ
ಚಿಮಣಿ ಎಣ್ಣೆ ಬೇಕದಕೆ ಹೆಣ್ಣೆ ಇರ-
ದಿದ್ದರೆ ಬತ್ತಿ ಫಜೀತಿ !

ಅನ್ನ ಬೇಯಿಸಲು ನಮ್ಮದೆ ಬೆಂಕಿಯು
ಸಾಲದು ಕಟ್ಟಿಗೆ ಬೇಕು
ಮುಸುಕು ಹಾಕಿ ( ಬೇಕಾದರೆ ತೆಕ್ಕೆಸಿ )
ಮಲಗುವ ಮಟ್ಟಿಗೆ ಸಾಕು !

---

## —ಗೆ

ನಿನಗೊಲಿದೆನು ನಾನೇತಕೊ ಅಂದು
ಹಾಗೆಯೆ ಹಳಿಯುವೆ ನಾನಿಂದು
ಕಾಯದೆಯಿದ್ದರೆ ಮದುವೆಯ ಮಟ್ಟಿಗೆ
ಪ್ರೀತಿಗೆ ಅಲ್ಲವು ಎಂದೂ

ನಿನಗೊಲಿದಾಕ್ಷಣ ಬೇರೊಬ್ಬಳನಾ
ಪ್ರೀತಿಸ ಬಾರದೆ ಎಲ್ಲೂ ?
ಎದೆಯಲಿ ಒಂದೇ ವೇಳೆಗೆ ಒಂದೇ
ಬಿಂಬವು ಇರುವದು ಸುಳ್ಳು

ಒಂದಿಕೆಯಿಲ್ಲವು ಸಹಜತೆಗೂ ಈ
'ಸಭ್ಯತೆ' ಎನ್ನುವ ನಡೆಗೂ
ಮನಗಳ ಸೆಳೆತವು ಕುಗ್ಗದು ತಿಳಿದುಕೊ
'ಸಂತತಿ' ಎನ್ನುವ ಭಿಡೆಗೂ

---

# ಪಶ್ಚಾತ್ತಾಪ

ಬಿಂಬಾಧರಗಳ ಬಿಚ್ಚದಿರು । ಸಖಿ
ಹಳಹಳಿಸಲುಃ ನೀ ಹಚ್ಚದಿರು
ಚಂದ್ರಮುಖಿ
ಅಯ್ಯೊ ಸಖಿ

ನಾ ನಿನಗೊಲಿಯುವ ಮುಂಚಿದ್ದವೆ ಈ
ಕುಠಾರ ದಂತಗಳೆಲ್ಲಾ ?
ನಿನ್ನ ವ್ಮೈ ನೆಣದ ಜತೆಗೆ ಬೆಳೆದಿಹುದು
( ನಾನು ಇಂಥವಳ ನಲ್ಲ ! )

ಎದೆಯ ತುಂಬಿರುವ ಪ್ರೀತಿಯನೆಲ್ಲಾ
ಕಿತ್ತುಕೊಡುವೆ ಇಕೊ ಇಕೊ ಹೆಣ್ಣೆ
ಮುಚ್ಚು ಮುಚ್ಚು ಆ ದಂತ ಪಂಕ್ತಿಗಳ
( ಮೂಗಿನ ಕೆಳಗೇ ದಿನ್ನೆ ! )
ಕಮಲಮುಖಿ
ಅಯ್ಯೊ ಸಖಿ

ನನ್ನ ಕಣ್ಣಪರೆ ಏಕೆ ಹರಿಯಿತೋ
ಶಿವಶಿವ ಶಂಭೋ ಮಹದೇವ
ಎಷ್ಟು ಮಿಡುಕಿದರೆ ಏನು ಫಲಾ ? ಅಹ
ಬೆಸುಗೆ ಬಿದ್ದ ಮೇಲೀ ಜೀವ

( ಇವಳ ಜತೆಗೆ ನಾ ಜನರ ಮಧ್ಯದಲಿ
ಹೋಗುವ ಹಟವೆನಗೇಕೆ ?
ಅಂತರಾತ್ಮನೇ ಇಂಥ ತಪ್ಪುಗಳ
ಇನ್ನು ಮಾಡದಿರು ಜೋಕೆ ! )
ಕಮಲಮುಖಿ
ಅಯ್ಯೊ ಸಖಿ

---

# ಹಾಡು

ಜತೆಗೆ ಮೆರೆಯುತಿದ್ದೆ । ಆತನ
ಜತೆಗೆ ಮೆರೆಯುತಿದ್ದೆ । ಅಥವಾ
ಎಂತೋ ಮರೆಯುತಿದ್ದೆ । ಮರೆತು
ನಿಂತೇ ಮಾಡುತಿದ್ದೆ
ನಿದ್ದೆ
ನಿಂತೇ ಮಾಡುತಿದ್ದೆ । ದ್ದೆ ದ್ದೆ ದ್ದೆ
ದ್ದೆ ದ್ದೆ ದ್ದೆ.
ಆತನು ಬದುಕಿದ್ದಿದ್ದರೆ
ದ್ದರೆ
ದ್ದರೆ
ಜತೆಗೆ ಮೆರೆಯುತಿದ್ದೆ....
ಇತ್ಯಾದಿ

---

# ಬೇಕಾದರೆ ಇರು

ಬೇಕಾದರೆ ಇರು ಸಾಕಾದರೆ ನಡೆ
ನಡೆ ನಿನ್ನಪ್ಪನ ಮನೆಗೆ
ತಿಂಗತಿಂಗಳಿಗೆ ಅರ್ಧ ಸಂಬಳವ
ಕಳುಹುವೆ ತಪ್ಪದೆ ನಿನಗೆ
ಸಹಜ ಪ್ರೇಮವನು ಹಂಚಿಕೊಡಲು ಬೇ –
ಡಾ ನಿನ್ನಪ್ಪಣೆ ನನಗೆ

ಒಂದಕಿಂತಲೂ ಹೆಚ್ಚು ಹೆಂಗಳನು
ಪ್ರೀತಿಸಬಾರದುಯೆಂದು
ಒಂದು ವೇಳೆ ಸರಕಾರ ಮಾಡಿದರೆ
ಬರದು ಕಾಯದೆಯನಿಂದು
ಏನು ಮಾಡುವೆನು ಗೊತ್ತೆ ? ನೋಡು ಇಕೊ
ನಮ್ಮಿಬ್ಬರನೂ ಕೊಂದು............
ನಡೆ ನಿನ್ನಪ್ಪನ ಮನೆಗೆ

# ಪ್ರೀತಿಗೇ ಜಯ

ಕಾದಲಗೆ ಕೈ ಮುಗಿದಳು
ತೋಳ ತೆರೆದು
ತೊಡೆಗೆ ಕರೆದು
ಅಪ್ಪಿಕೊಳ್ಳಲು ಜಿಗಿದಳು
ಠಣ್ಣನೆ
ಅವನ ನೆತ್ತಿಗೆ ಜಿಗಿದಳು

ಒಲಿದವನ ತಲೆಯನ್ನೆ ಏರಿ
ಉಗುಳ ಭಾಗೀರತಿಯ ಕಾರಿ
ಪ್ರೀತಿಗೇ ಜಯವೆಂದು ಸಾರಿ
ಪೂಜ್ಯಳಾದಳು ಹೆಂಗಸು
ನಾಚಿ ಕಣ್ಣನು ಮುಚ್ಚಿಕೊಂಡು
ತಪದ ನೆವದಲಿ ಶುಂಭಗಂಡು
ಅಲುಗಲೇ ಇಲ್ಲವು ತುಸೂ !

---

# ನಾನೆಂದಿಗೂ....

ನಾನೆಂದಿಗೂ ನಿನ್ನಕೊರಳ ಪದಕವೆ ಆಗಿ
ಮರೆತು ಜನತೆಯ, ಜೋತು ಬೀಳಲಾರೆ
ಒಂದು ಹೆಣ್ಣಿನ ಒಲುಮೆಯಾಳದಲಿ ವಿಶ್ವವನ
ಎಂದಿಗೂ ಮುಳುಗಿರಿಸಿ ಬಾಳಲಾರೆ

ಒಂದು ಹೆಣ್ಣಿನ ಮೈ-ಮನಕ್ಕೆ ಜೀವನವನ್ನ
ಧಾರೆಯೆರೆಯುವ ಪ್ರೇಮ ವೀರರುಂಟು
ಪ್ರೇಮ ಪ್ರೀತಿಗಳೆಂಬ ಹುಚ್ಚು ಹೊಳೆಯಲಿ ನನ್ನ
ಕರ್ತವ್ಯಗಳ ತೇಲಿಬಿಡುವುದೆಂತು ?

ನನ್ನ ಬಾಳುವೆಗೊಂದು ಕಳೆಬಂತು ನಿನ್ನಿಂದ
ನೀನೆ ಆ ಸರ್ವಸ್ವವೆನ್ನಲಾರೆ
ನಿನಗಿಂತ ಕಡಿಮೆಯಲ್ಲದ ವಿಷಯವಿದೆ ನೆಲದಿ
ಒಲವು ದಾಟಿದೆ ಹೆಣ್ಣಿನೆದೆಯ ಮೀರಿ.

ಹೀಗೆ ನನಗನಿಸಿದುದ ಮನಬಿಚ್ಚಿ ಹೇಳಲಿಯ ?
ಪ್ರೀತಿಸಲು ವೇಳೆಯೇ ಇಲ್ಲ ನನಗೆ
ಈ ಬಾಳುವೆಯ ಗಾಣಕೆಲ್ಲ ಗಂಡಸು ಕೋಣ
ಬಳಲಿ ಬರುವೆನು ಮೂರು ಸಂಜೆ ಮನೆಗೆ.

ದಣಿದು ಹೆಣಬಿದ್ದಿರುವ ಇಂಥವೇಳೆ
ನನಗೇಕೆ ನಿನ್ನ ಈ ಪ್ರಣಯಲೀಲೆ ?

ನನ್ನಿಂದ ಬೇಸತ್ತು ನಿನ್ನ ಮನ ಚಲಿಸುವದೆ ?
ಬೇರೆ ಬೆನ್ ಹತ್ತಿಹುದೆ ? ಸತ್ಯ ಬೊಗಳು
ಕ್ಷಮಿಸು. ಬಲುಕಟು ನುಡಿದೆ. ಹಿಗೆಯೇ ಅಳುತಿಹೆಯ
ನಾನಿರದ ಹನ್ನೆರಡು ತಾಸು ಹಗಲೂ ?

ಹೆಣ್ಣೆ, ಇಂದಿನ ಬದುಕು ಜೊಂಪಿಗೂ ಅನುವಿರದ
ಬುದ್ಧಿಯಾಗಕೆ ಕುರಿಯ ತರಿವ ಹೋರೆ
ನಿನಗಿಂತ ಕಡಿಮೆಯಲ್ಲದ ವಿಷಯವಿದೆ ನಲದ
ಒಲವು ದಾಟಿದೆ ಹೆಣ್ಣಿನೆದೆಯ ಮೀರಿ.

---

# ರಸಪ್ರಕರಣ

ಎದುರು ಬಿದ್ದ ಮಡದಿ ಹೆಣವೆ
ಆಗಿದ್ದಿತು ವಿಭಾವವು
ಆ ಗಳಿಗೆಗೆ ಅವನೆದೆಯಲಿ
ಶೋಕಸ್ಥಾಯೀ ಭಾವವು
ಕಣ್ಣೆಯನ್ನು ತೋಯಿಸಿತ್ತು
ಅಳುವಿನ ಅನುಭಾವವು

ಶೋಕದೊಡನೆ ತಲೆದೋರಿತು
ಕೊನೆಗೆ ಶೋಕವನೇ ಮೀರಿತು
ಇನ್ನೊಬ್ಬಳ ನೆನಹಿನ ಆ
ವ್ಯಭಿಚಾರೀ ಭಾವವು !

---

# ನಮ್ಮ ಸಾವು

ನಮ್ಮ ಭಾವನೆಗಳನು ಬದಿಗಿರಿಸಿ ಒಂದಿರುಳು
ಹಾಸಿನಲಿ ಮಾತನಾಡಿದೆವು ನಾವು
ನಮ್ಮಿಬ್ಬರಲಿ ಮೊದಲು ಯಾರನೊಯ್ಯಲಿ ನಮಗೆ
ಎಂದೆಂದಿಗೂ ತಪ್ಪದಂಥ ಸಾವು ?

" ಹೆಣ್ಣು ಜನ್ಮವು ನೋಡಿ ವೈಧವ್ಯವೇ ನರಕ
ಮೊದಲು ನನಗೇ ಮರಣ ಬರಲಿ " ಎಂದು
ಅವಳು ಹೇಳಲು ನುಡಿದೆ " ತಪ್ಪು ತಿಳಿದಿಹೆ ನೀನು
ವಿಧುರನಿಗೆ ದುಃಖವೇ ಇಲ್ಲವೆಂದು.

ರಾಣಿಯಿಲ್ಲದ ಜೇನು ಗೂಡುಂಟೆ ಲೋಕದಲಿ ?
ಪ್ರೇಮದರಸಿಯ ಬಿಟ್ಟು ಬಾಳಲೆಂತು ? "
" ನಿಮಗೇನು ? ನೂರಾರು ' ರಾಣಿ'ಗಳು ಕರೆಯುವರು
ನಿಮ್ಮ ಮಡದಿಯ ಚಿತೆಯ ಬಳಿಗೆ ನಿಂತು."

" ವಿಧವೆಯರು ಮದುವೆಯಾಗದ ಮಾತು ಹಳೆಗೊಡ್ಡು
ಗಂಡನನು ಬಿಡುವ ಈ ಕಾಲದಲ್ಲಿ "
" ಮದುವೆಯಾಗುವ ಮಾತು ಬಿಗಿಯಲ್ಲ, ಮೂಕಮನ
ಬದಲಬೇಕಲ್ಲ ಹೆಂಗರುಳಿನಲ್ಲಿ

" ಒಬ್ಬನನು ಪ್ರೀತಿಸಿದ ಮೇಲೆ ತೀರಿತು. ಹೆಣ್ಣು
ಇನ್ನೊಬ್ಬನಿಗೆ ಒಲಿಯಲಾರಳೆಂದೂ "
" ಗಂಡಸರ ಪ್ರಿತಿಯೂ ಹಾಗೆಯೇ ನಿಜವಾಗಿ
ಅದರೀತಕೆೊ ತಪ್ಪು ತಿಳಿದುಕೊಂಡು—

ಗಂಡಸರ ಪ್ರೀತಿಯಲಿ ಸಂಶಯವ ಮಾಡುವಿರಿ
ಕಳ್ಳ ಹೆರವರನೆಂದು ನಂಬಲಾರ
ಹೀಗಾಗಿ ಒಲಿದು ಹೆಣ್ಗಂಡುಗಳು ಕೂಡಿಯೂ
ಅವರ ಮನಗಳು ಮಾತ್ರ ಮೈಲು ದೂರ ! ”

“ ಹಾಗಾದರಿಬ್ಬರೂ ಒಮ್ಮೆಯೇ ಸಾಯೋಣ
ಹೀಗೆ ಅಪ್ಪುಗೆ ಮೈಯ ಬಿಗಿದ ವೇಳೆ ”
ಬಹಳ ಒಳ್ಳೇ ಆಸೆ ! ಬಯಸಿದಂತಾಗುವುದೆ ?
ನಮ್ಮೆಣಿಕೆಯಂತಿಲ್ಲ ಶಿವನ ಲೀಲೆ ”

“ ಹಾಗಾದರೊಬ್ಬರೂ ಸಾಯುವದೆ ಬೇಡ. ಸುಖ-
ವಾಗಿರುವ ನಿತ್ಯವೂ ಇಂದಿನಂತೆ ”
“ ಅಲ್ಲೆ, ಬುದ್ಧಿಯನೆಲ್ಲಿ ಹಾರಿಸಿದೆ ? ಸುರುವಾಯ್ತು
ಬಿಗಿಹಿಡಿದ ನಿನ್ನಭಾವನೆಯ ಸಂತೆ ? ”

“ ಸಂತೆಯೆಂದೊಡನೆಯೇ ನೆನಪಾಯ್ತು ನಾಳೆಯೇ
ಸಂತೆ ! ತೆಂಗಿನ ಕಾಯಿ ತೊಗರಿಬೇಳೆ
ಹಲವು ಸಾಮಾನುಗಳ ತರಲಿಹುದು. ನೀವು ಸಹ
ಬರುವಿರಲ್ಲವೆ ನನ್ನ ಜತೆಗೆ ನಾಳೆ ? ”

ಇರುಳಿನಾ ಹರಟೆಯಲಿ ನಮ್ಮ ಸಾವುಗಳಂಥ
ಗಂಭೀರ ವಿಷಯಗಳು ಬೆಳೆಯಬಹುದೆ ?
ಏಕೊ ಸುರುವಾಗಿ ಸಂತೆಯ ಸೇರಿದಾ ಮಾತ
ನಮ್ಮ ಎದೆಗಳ ನಡುವೆ ಎಳೆಯಬಹುದೆ ?
ಅಂತೆಯೇ ಮತ್ತೆ ಅದನೆತ್ತಲಿಲ್ಲ
ಮುಂದಿನದ ತಿಳಿದಿಹುದೆ ಲೋಕವೆಲ್ಲ !

---

# ತಿಂಗಳ ಕೊನೆ

ತಿಂಗಳ ಕೊನೆಯಿದು
ಸಂಬಳಕಾಗಿಯೆ
ಅಂಗೈ ತುರಿಸುತಿದೆ.
ಕಿಸೆಯೊಳಗೊಂದೂ
ಕಾಸೂ ಇಲ್ಲದೆ
ಬರಿ ಬರಿದೆನಿಸುತಿದೆ.

" ಅಕ್ಕಿಯು ಬಿಡಿ ಜೋಳವು ಸಹ ಇಲ್ಲ
ತೀರಿದೆ ಹುಳಿ, ಉಪ್ಪು "
" ಈ ದಾರಿದ್ರ್ಯದಿ ನಾನೂ ನೀನೂ
ಹುಟ್ಟಿದುದೇ ತಪ್ಪು

" ಪೆಟ್ಟಿಗೆ ಬುಡಕೂ ಕಿಸೆಗಳ ತಳಕೂ
ಶೋಧವ ಮಾಡುವೆನು
ಒಂದೆರಡಾಣೆಯು ಸಿಕ್ಕೇ ಬಿಟ್ಟರೆ
ಪೇಟೆಗೆ ಓಡುವೆನು. "

" ಮರತೇ ಬಿಟ್ಟರೆ ಸುಬ್ಬಾಭಟ್ಟರು
ಕೊಡಲಿದೆ ಒಂದಾಣೆ "
ಶಾಬಾಸ್ ನೆನಪೇ ! ಅವರಿಗೆ ಅಕ್ಕಿಯ
ಕೊಡಲೆಷ್ಟಿದೆ ಜಾಣೆ ?"

" ಗೆಳೆಯರು ಎನ್ನುವ ಹಿಂಡೇ ಇದೆಯಲ
ಅವರಾದರು ಸಾಲ
ಕೊಡಬಾರವೆ ಈ ಗತಿಯನು ನೋಡಿ
ಎಂತಹ ಕಲಿಕಾಲ "
" ಅವರಿಗೆ ಸಹ ಅಲ್ಲವೆ ತಿಂಗಳಕೊನೆ ?
ನಮ್ಮಂತೇ ಅವರು
ನನ್ನಂತೇ ಹೊರನೋಟಕೆ ನಗುವರು
ಒಡಲಲಿ ಕಹಿ, ಚೊಗರು. "

" ಹಾಗಾದರೆ ಇಂದಡಿಗೆಯೆ ಬೇಡವೆ
ಇಲ್ಲಾ ಹಿಡಿ ಹಿಟ್ಟು "
" ಈ ಉಂಗುರವನು ಮಾರಲೆ ಅಥವಾ
ತರಲೇ ಅಡವಿಟ್ಟು ?

" ಅಬ್ಬಾ ಧೈರ್ಯವೆ ಕೈಗಳೆಯುವದೇ
ಇದ್ದೊಂದುಂಗುರವ ?
ಮೂರೇ ದಿನಗಳು ಉಳಿದವು ಇನ್ನು
ಹೇಗಾದರು ಇರುವ "

" ಹೆಂಗಸರೆಂದರೆ ಹೇಗಾದರೂ ಸರಿ
ಗಂಡಸರಂತಲ್ಲ "
" ಓ ಹೋ ಗಂಡಸರೆಂದರೆ ಶೂರರು
ಹಣವಿರಬೇಕಲ್ಲ !"

" ಶೂರರು ಗೀರರು ಎಂದಣಕಿಸದಿರು
ನಿನ್ನಪ್ಪನ ಬಳ್ಳಿ "
" ಅಪ್ಪನ ಸುದ್ದಿಯ ತೆಗೆಯುವಿರೇತಕೆ
ಹಳೆ ಜಗಳಕೆ ಸುಳ್ಳೇ ?"



5

" ಬಿಗಡುತ್ತರವನು ಕೊಡದಿರು. ಸುಮ್ಮನೆ
ಕುಳಿತಿರು ನಡೆ ಒಳಗೆ "
" ಎಲ್ಲಾ ಹೀಗೇ ಹೆಂಗಸರೆಂದರೆ
ಇವರಿಗೆ ಕಾಲ್ ಕೆಳಗೆ "

" ನಾಲಿಗೆ ಬಿಗಿಹಿಡಿ ಶ್ರೀಮಂತನ ಮಗ-
ಳಾದರೆ ನನಗೇನು ?
ಶ್ರೀಮಂತರನೇ ಕೂಡಿಕೊ ನಡ ನಡ
ಇಲ್ಲೇತಕೆ ನೀನು ?

" ಅಳುವಿನ ಆಯುಧ ತೆಗೆದೇ ಇರುವವು
ಕಣ್ಣೊರಸಿಕೊ ಬೇಗ
ಯಾರಿಗೆ ಬೇಕೋ ಈ ಸಂಸಾರ
ದೇವರೆ ಹಾಳಾಗ

" ಯುಗಗಳ ಹಾಗೇ ತೋರುವವಯ್ಯೋ
ಈ ದಿನಗಳ ತಾಸು
ಇಂತಹ ಬಾಳುವೆಯೇತಕೆ ಶಿವನೆ
ಸನ್ಯಾಸವೆ ಲೇಸು. "

" ಒಂದೇ ಗಳಿಗೆಗೆ ವೈರಾಗ್ಯವೆ ವ್ಹ ! "
ಎಂದಳು ನಸು ನಕ್ಕು
ತಿಂಗಳ ಕೊನೆಯಾ ತಳಮಳ ಸತ್ತಿತು
ಅಪ್ಪುಗೆಯಲಿ ಸಿಕ್ಕು !

---

# ನೆತ್ತರ: ನೀರು

“ ನೀರಿಗಿಂತಲೂ ನೆತ್ತರಿ ದಪ್ಪ ”
ನಿನಗಿಂತಲು ಅದಕೇ ನನ್ನಪ್ಪ
ನನಗೆ ಹೆಚ್ಚು ಹೆಚ್ಚು
ನೆತ್ತರಿಗಿಂತಲೂ ನೀರೇ ಆಳ
ಎಂದೆ ತಂದೆಗಿಂತಲು ನೀ ಭಾಳ
ನನಗೆ ಮೆಚ್ಚು ಮೆಚ್ಚು

ನೀರಿಗಿಂತಲೂ ನೆತ್ತರಿ ಭಾರ
ಆದರೆ ನೀರಿನದೇ ವಿಸ್ತಾರ
ನೆತ್ತರ ಕೆಳಗೆ
ನೆತ್ತರ ಮೇಲೆ
ನೀರಿನ ತಣ್ ಬಿಸಿ ಧಾರಾ

ನೆತ್ತರ ಬತ್ತಿ
ನೀರೂ ಆರಿ
ಹಾರಲು ಮಣ್ ಬಿಸಿ ಬೂದಿ
ನೀನು ಅಪ್ಪ
ಎಷ್ಟೋ ಗಪ್ಪ
ಕಾಣುವೆ ನಾ ಹೊಸ ಹಾದಿ

---

# ಹಸ್ತಾಂದೋಲನ

‘ ಪಲಾಯನ’ದ ಕವಿ ವಿ. ಜಿ. ಭಟ್ಟರು
‘ ಆತ್ಮಶೋಧನೆ’ಗೆ ಕೈ ಎರಡಿಟ್ಟರು
ಇವರು ಕವನಿಸಲು ವಿಷಯವೆ ಇಲ್ಲ
ಹಾಗೆ ಕೇಳಿದರೆ ವಿಷಯವೆ ಎಲ್ಲ
ಕಮಲ, ಕೋಗಿಲೆಯು ಬೇಕಿಲ್ಲ
ಎಮ್ಮೆ, ನಾಯಿಗಳು ಸಾಕಲ್ಲ !

‘ ಕಾವ್ಯನಿವೇದನೆ’ಗಳ ತಾ ಕೇಳಿ
‘ ಕಾವ್ಯವೇದನೆ’ಯ ಭರದಿಂ ತಾಳಿ —
ವೇದನೆಯೆಂಬುದು ಪ್ರಸವದ ಕೇಳಿ !
ಹಡೆದರು ತಮ್ಮೀ ಕಾವ್ಯದ ಕಾಳಿ !

*   *

ಜೀವನವೆಂದರೆ ಘನ-ಗಂಭೀರಾ
ಅಲ್ಲದೆ ಬಳ್ಳಿಗಳೊಲು ಸುಕುಮಾರಾ
ಅಂದರೆ ಭಟ್ಟರ ಮನ ಬಲು ಭಾರಾ
ಅವರಿಗೆ ಹಾಡೂ-ಪಾಡೂ ಹಗುರಾ

ಏಳದೆ ಜಡವಾಗಿದ್ದರೆ ಮೈ-ಮನ
ಬಾಳುವೆ ಸಹಜವೆ ? ಓ—ಆಕ್ರಂದನ !
ಬುದ್ಧಿಯ ವಸ್ತುವ ಸಲೆ ಹಿಡಿತರಿಸಿ
ಭಾವ ಸಮಾಧಿಯ ಸೆರೆಯಿಂ ಬಿಡಿಸಿ
ಆದಿಮಾನವನ— ಮಂಗನ ಕರೆಸಿ
ಎಲ್ಲಾ ಅಣಕದ ಮೂಲವಿದೆನಿಸಿ,—

ವಕ್ರತೆ ಬರಲಿ, ನಕ್ಕರೆ ನಗಲಿ
ಭಾರ ಕಲ್ಲಿಗೇ ಜೋತಿರಲಿ
ಬಾಳಬಳ್ಳಿ ಅಲರುತ್ತಿರಲಿ
ಅಲರೆ ಫಲವಾಗಿ ಮೆರೆದಿರಲಿ
ಕಾಯಿ— ಭಾರವನು ತೊರೆದಿರಲಿ

ನಗುವೇ ಬಾಳಿನ ಹಿರಿಹೊನ್ನು
ಅಳುವನೆತ್ತಿ ಎಸೆಯಿರಿ ಮಣ್ಣು

*   *   *

ನಗುವು ಯಾವ ರಾಜ್ಯದ ಸರಕು ?
ಮನುಜನ ಬುದ್ಧಿ ದಿವಾಳಿಯ ಬಿರುಕು
ಭೂಮಿಯ ಮೆಟ್ಟಿದ ಕಾಲ್ಮುರಿ ಜಿರಕು

ಜೀವ ಕಾಲಿಗೋ—ಕಾಲ್ಮುರಿಗೋ
ಕಾಲು ಚಲಿಸಿತೋ—ಕಾಲ್ಮುರಿಯೋ
ಭೂಮಿ ಸರಿಯಿತೋ—ಕಾಲು ಸರಿಯಿತೋ
ಕಾಲ ಸರಿಯಿತೋ—ಸಾಲ ಸರಿಯಿತೋ
ಸರ-ಸರ-ಸರ-ಸರ ಸರಿಪದ್ಪುಂಟು
ನಿಂತವರೆಲ್ಲರು ಬಡಿದರು ಪಂಟು !

*   *   *

ರೇವನ್ ಕೋಳಿಗೆ ಹೊಟ್ಟೆಯು ಬರಿದು
ನಗು, ದ್ವಿಷೋಡಶ ಹಲ್ಲನು ತೆರೆದು
ಬಟ್ಟೆ ದೊರೆಯಲಿಲ್ಲೆನಬೇಡ
ನಡೆದ ದಾರಿಯೇ ಬಟ್ಟೆಯು ನೋಡ
ಸಕ್ಕರೆ ಸಿಗಲಿಲ್ಲೆನಬೇಡ
ವನಮಹೋತ್ಸವವ ಬಿಡಬೇಡ
ಹಾಲು ತುಪ್ಪ ಬೇಡಲೆ ಬೇಡ
ವನಸ್ಪತಿಯ ಸೀ ಬಿಡಬೇಡ
ನತಿಯೆನಗಿಲ್ಲಾ ಎನಬೇಡ
ಬರುತಿದೆ ಬೇಗನೆ ಹಿಂದೂ ಕೋಡ

ಬೇಕು ಎನ್ನುವುದ ಬಿಟ್ಟುಬಿಡು
ಬೇಡ ಎನ್ನುವುದ ಇಟ್ಟುಬಿಡು
ಇದುವೇ ಭಟ್ಟರ ' ಆತ್ಮಶೋಧನ '
ಇನ್ನೇತಕೆ ಪರಮಾತ್ಮ ಬೋಧನ ?

ಧಾರವಾಡ
೨-೮-೫೧

**ದತ್ತಾತ್ರೇಯ ಕುಲಕರಣಿ**

# ಪರಿವಿಡಿ

# ನವೀನ ಸರಸ್ವತಿಗೆ

ಲಕುಮಿಯೊಡನೆ ವಿದ್ಯಾನಿಲಯಗಳಲಿ ಪಟ್ಟವೇರಿದಾಕೆ
ಸಕಲ ಭಕುತರಿಗೆ ವಿಕಲವಿರದೆ ಪದವಿ ದಯೆಮಾರಿದಾಕೆ

ಯೂನಿವರ್ಸಿಟಿಯ ಮೊಹರುಗಳನು ತಲೆಗಿಂಬುಮಾಡಿದಾಕೆ
ಪ್ರಶ್ನೆಪತ್ರದೂತರನು ಕಳುಹಿ ಸತ್ವವನು ನೋಡಿದಾಕೆ

ಬಾಳಿಗಿಂತಲೂ ಕೂಳೆ ಮೇಲು ಎಂದೇನೋ ನುಡಿಸುವಾಕೆ
ಆಳವಾಗಿ ಅರಿವವಗೆ ಅನ್ನದ ಚಿಂತೆ ಹಿಡಿಸುವಾಕೆ.

* ಇಂದು ನಿನ್ನೆಡೆಗೆ ತಾಯೆ, ಬರಲು ಈ
ಬಿ. ಎ. ಪದವಿ ಸಾಕೇ ?
ಈ ಪದ್ಯಗಳನು ಆ ಪಠ್ಯಪುಸ್ತಕದಿ
ಹುಗಿಸಬೇಡ ಜೋಕೆ

---

* ಪಾಠಾಂತರ :
ಇಂದು ನಿನ್ನೆಡೆಗೆ ಅಮ್ಮ, ಬರಲು ಈ
ಎಂ. ಎ. ಪದವಿ ಸಾಕೇ ?

# ಕವಿತೆಗೆ

ಬಾ ಕವಿತೆ ಬಾ ಗೆಳತಿ
ಬಾರೆನ್ನ ನಲ್ಲೆ
ಸಂಸಾರ ಹೂಡಬಾ
ಈ ನಗರದಲ್ಲೆ.

ಮನೆಯೊಂದು ಸಿಕ್ಕಿಹುದು
ಹಿಡಿದಿರುವೆನೀಗ
ಸಾಕಾಗದೇ ಹೋಗ
ಇಬ್ಬರಿಗೆ ಜಾಗ.

ಒಂದು ಒಂದೇ ಒಂದು
ಹತ್ತಡಿಯ ಕೋಣೆ
ಅಡಿಗೆ ಜಳಕಗಳೆಲ್ಲ
ಅದರಲೇ ಜಾಣೆ

ಕಿಟಕಿ ಸಹ ಅದಕುಂಟು
ನೀನು ಬಂದು ಸಿಂಮೆಂಟು
ಹಾಕಿದರೆ ಓಡೀತು
ಹೆಗ್ಗಣದ ಸೇನೆ !
ಇಂಥ ಪ್ರಂಶಾತ ಮನೆ
ಎಲ್ಲಿಯೂ ಕಾಣೆ.

## ಆತ್ಮಶೋಧನೆ

ಹದಿನೈದೆ ರೂಪಾಯಿ
ಬಾಡಿಗೆಯು ಇದಕೆ
ಜತೆಗೆ ನೀನಿರೆ ಚಿನ್ನ
ಸಾಕು ಸಾಕೇ ನನ್ನ
ಸಂಬಳವು-ಐವತ್ತು—
ಸಾಯದಿರುವುದಕೆ

ಬೇಗ ಬಾ ಸಾಕಾಯ್ತು
ಹೋಟಲಿನ ಊಟ
ಮೇಲಾಗಿ ರೇಶನ್ನಿ—
ನಧಿಕಾರಿ ಕಾಟ.

( ಯಾವುದೋ ಹೆಣ್ಣೊಂದ
ಕರೆತಂದು ತೋರಿ
ಅವಳೆ ಹೆಂಡತಿಯೆಂದು
ಅವನೆದುರು ಸಾರಿ

ಕಾರ್ಡು ಮಾಡಿಸಿ ತಂದೆ
ರೇಶನ್ನ ಕೋಟಾ ! )

ಕನಸ ಕಾಣುತ್ತಿರುವೆ
ನೀ ಬಂದ ಮೇಲೆ
ನಮ್ಮ ಸಂಸಾರ ಸುಖ
ಸಂತಸದ ಲೀಲೆ

ನೀನು ಅಡಿಗೆಯ ಮಾಡಿ
ನೀರ ನಾ ಜಗ್ಗಿ
ನೀನು ಮುಸುರೆಯ ತಿಕ್ಕಿ
ಇಬ್ಬರೂ ಹಿಗ್ಗಿ

ಪರ್ಣಕುಟಿ ಗ್ರಂಥಮಾಲೆ

( ಮುಂದಾಳುಗಳ ನಂಬಿ
ತೊಪ್ಪಲವ ಮುಕ್ಕಿ )

ನೀನು ಖಾದಿಯ ನೂತು
ಅರಿವೆಯನು ಗಳಿಸಿ
ನಾನು ತಗಣೆಯ ಕೊಂದು
ನೆತ್ತರವನುಳಿಸಿ
ಅರವಿಂದ ಕಂಪನಿಯ
ವಿಮೆಯನೂ ಇಳಿಸಿ
ಆದರ್ಶರೆನಿಸೋಣ
ಈ ನಗರದಲ್ಲೇ

ಬಾ ಕವಿತೆ ಬಾ ಗೆಳತಿ
ಬಾರೆನ್ನ ನಲ್ಲೆ !
ಇತ್ಯಾದಿ....

---

# ಏನು ಮಾಡಲಿ ?

ಏನು ಮಾಡಲಿ ವೇಳೆ ಹೋಗದು
ಏತಕೂ ಮನಸಾಗದು.

ಕುಳಿತುಕೊಳ್ಳಲೊ ? ಮಲಗಿಕೊಳ್ಳಲೊ ?
ಹೊದೆದುಕೊಳ್ಳಲೊ ? ಬೇಡವೊ ?
ಒಂದು ಬಗೆ ಸೆಕೆ; ಅಲ್ಲ, ತುಸು ಚಳಿ
ಹೊರಗೆ ಬಿಸಿಲೋ ಮೋಡವೊ ?

ನಿದ್ದೆ ಮಾಡುವೆನೆಂದರೂ ಸಹ
ಖೋಡಿ ಕಣ್ಣೆವೆ ಕೂಡದು.
ಚಿಂತೆ ನೂರಾರಿದ್ದರೂ ಈ-
ಗೊಂದು ಕೂಡಾ ಮೂಡದು.

ಓದಲೇ ಪುಸ್ತಕವ ? ಪತ್ರಿಕೆ ?
ಬಂದ ಪತ್ರವನಾದರೂ ?
ಇಂಥ ಹೊತ್ತಿಗೆ ಹರಟೆಹೊಡೆಯಲು
ಬರಲಿ ಕಡು ಹಗೆಯಾದರೂ

ಬೀಡಿ ಸಿಗರೇಟೊಂದನೂ ಚಟ-
ಮಾಡಿಕೊಳ್ಳದೆ ಕೆಟ್ಟೆನು
ಈಗ ಸೇದಲೆ ? ಹೋಗಿ ತರುವವ-
ರಾರು ಬೀಡಿಯ ಕಟ್ಟನು ?

ಆಗಲೇ ನಾ ರಾಯಭಾರಿಯು
ಸಹರದಾ ಮರುಭೂಮಿಗೆ ?
ಅಥವ ಸ್ಟಾಲಿನ್ ಮೀಸೆಗೇ ಹುರಿ-
ಹಾಕಿ ಬರಲೇ ರೂಮಿಗೆ ?

ಅನ್ನ ಪ್ರಶ್ನೆಯ ಬಿಡಿಸಲೇ ? ನೀ-
ರನ್ನು ಮಂದಿಗೆ ಕುಡಿಸಲೇ ?
ಬಾಂಬುಗಳ ಅಗಿಹಾಕಲೇ ? ಕಾ-
ಶ್ಮೀರದಾಚೆಗೆ ನೂಕಲೇ ?

ಗಾಂಧಿ ಚರಕವ ಹಿಡಿಯಲೇ ? ಅವ-
ನಂತೆ ಸತ್ಯವ ನುಡಿಯಲೇ ?
ಜಿನ್ನನಂತೇ ಸಿಡಿಯಲೇ ? ಟ್ರೂ-
ಮನ್ನನಂತೇ ಕಿಡಿಯಲೇ ?
ಅಥವ, ( ಸದ್ಯಕೆ ಆಸರಾಗಿದೆ )
ಮಡಿಕೆ ತಣ್ಣೀರ್ ಕುಡಿಯಲೆ ?

ಕೋರಿಯಾ ರಂಗಕ್ಕೆ ಧಾವಿಸಿ
ಬಿದ್ದ ಹೆಣಗಳ ಹೊರಲಿಯಾ ?
ದೂರವಾಯಿತು. ಏನು ಮಾಡಲಿ ?
ಬಾರಿಸಲೆ ಈ ಮುರಲಿಯಾ ?

ಏನು ಮಾಡಲಿ ವೇಳೆ ಹೋಗದು
ಏತಕೂ ಮನಸಾಗದು
ಇಷ್ಟು ಗೀಚಿದ ಮೇಲೆ ಸಹ ಒಂ-
ದಿಷ್ಟು ಜೊಂಪೂ ಏರದು
ಆಕಳಿಕೆಯೂ ಬಾರದು.

---

# ಪ್ರದರ್ಶನ

ನಗರ ಸಭೆಯು ನಡೆಸಿತೊಮ್ಮೆ
ಮುದುಕಿಯರ ಪ್ರದರ್ಶನ
ತಂದರು ಹಳೆ ಹಣ್ಣು ಮುದಕಿ-
ಗಳಿಗೆ ಹಚ್ಚಿ ಅರಿಸಿನ !

ಅಜ್ಜಿಯನ್ನು ಇರಿಸಲೆಂದು
ನಾನು ಸಹಾ ಹೋದೆನು
ಮೊದಲನೆಯಾ ಬಹುಮಾನವ
ಬಯಸಿ ಬಹಳ ಕಾದೆನು.

ಮುದುಕಿಗಳನು ನೋಡಿ ನೋಡಿ
ನಗರವೆಲ್ಲ ನಡೆಯಿತು
ನನ್ನ ಅಜ್ಜಿಯೆದುರು ಮಾತ್ರ
ಹೆಚ್ಚು ಹೊತ್ತು ತಡೆಯಿತು.

ಅನಿಸಿತೆನಗೆ ಮೊದಲನೆಯಾ
ಬಹುಮಾನವೆ ಸಿಕ್ಕಿತು
ಆದರೇನೊ ನಗರವೆಲ್ಲ
ಅಜ್ಜಿ ಕಂಡು ನಕ್ಕಿತು.

ಎಲ್ಲ ಮಂದಿ ತಾವು ತಂದ
ಮುದುಕಿ ಚೆಂದ ಬಣ್ಣಿಸಿ
ಒದರೆ, ನಾನು ನನ್ನಜ್ಜಿಗೆ
ಕೆಂಪುಕವಳ ತಿನ್ನಿಸಿ-

ಬನ್ನಿ ಬನ್ನಿ ನೋಡಿ ಇವಳ
ತುಟಿಯು ಥೇಟು ಹೊಸಾ ಹವಳ
ಮೈಯ ಬಣ್ಣ ನಿಂಬೆಯು
ಇವಳು ವಿಶ್ವಕರ್ಮ ಕಡೆದ
ಒಂದೇ ಒಂದು ಗೊಂಬೆಯು.

ಎಂದು ಕೂಗಿ ಹೋಗುತಿರುವ
ಜನರನೆಲ್ಲ ಕರೆದೆನು
ಒಬ್ಬರಿಗೂ ಕಣ್ಣೆ ಇಲ್ಲ
ಎಂದು ಅವರ ಜರೆದೆನು.
ನೆರವಿ ಕರಗೆ ಬಹುಮಾನದ
ಆಸೆಯನ್ನೆ ತೊರೆದೆನು.

ಕೊನೆಗೆ ಪ್ರದರ್ಶನಕೆ ತಂದ
ಮುದುಕಿಗಳನು ನೋಡಿದೆ
ಅವರ, ನನ್ನ ಅಜ್ಜಿ ಚೆಲುವ
ತಿಳಿದು ತೂಕ ಮಾಡಿದೆ.

ಅನಿಸಿತೆನಗೆ ಪ್ರೀತಿಯೇ ಕು-
ರೂಪದೊಂದು ಕೋಶವು
ಪ್ರೀತಿಯುಳಿದು ನೋಡೆ ಹರಿವು-
ದೆನಿತೊ ದೃಷ್ಟಿದೋಷವು.

---

# ಅಜ್ಜಿಯ ಬಯಕೆ

ನನ್ನ ಅಜ್ಜಿಗೆ ನೂರು ವರುಷ ತುಂಬುತ ಬಂತು
ಎಂದು ಸಾಯುವಳೆಂದು ಹೇಳಲೆಂತು ?

ಅವಳ ಮಂಡೆಯಲೊಂದು ಬೊಕ್ಕೆ ಮೂಡುತ್ತಿಹುದು
ಅದರ ಗುಣಕಾಗಿ ಇಂಗ್ಲಾಂಡಿನಲ್ಲೇ
ಮೂರು ತಿಂಗಳು ಇದ್ದು ಬರುವುದನು ಬಯಸಿಹಳು
ಗುಣಪಡಿಸಬೇಕೆಂಬ ಮಾತು ಸುಳ್ಳೆ ?

" ಈ ದೇಶವಲಿ ವೈದ್ಯರೊಬ್ಬರೂ ಸರಿಯಿಲ್ಲ
ಇಲ್ಲಿ ಆ ಬೊಕ್ಕೆ ಗುಣವಾಗದೆಂದೂ
ಇಲ್ಲಿಯೇ ಮದ್ದುಗಳ ಮಾಡಿಸುವೆವೆನ್ನುವಿರ ?
ಬೇಡ. ಹುಗಿದೇ ಬಿಡಿರಿ ನನ್ನ ಕೊಂದು.

" ಅಜ್ಜಿಯಲಿ ಮಮತೆಯಿದ್ದರೆ ಅಲ್ಲಿಗೊಯ್ದು
ಬದುಕಬೇಕೆಂದರೀ ಬೊಕ್ಕೆ ಕೊಯ್ದು
ಗುಣಪಡಿಸಿ, ಇಲ್ಲದಿರೆ ಕೊಂದು ಬಿಡಿರಿ
ಜೀವವಿರುವಾಗಲೇ ನನ್ನ ಸುಡಿರಿ."

ನನ್ನ ಅಜ್ಜಿಗೆ ನೂರು ವರುಷ ತುಂಬುತ ಬಂತು
ನಾಳೆ ಸಾಯಳು ಎಂದು ಹೇಳಲೆಂತು ?

ಅವಳ ಮಂಡೆಯ ಬೊಕ್ಕೆಗಾಗಿ ಸಾವಿರಗಳನು
ಖರ್ಚು ಮಾಡುವುದೆಂಥ ಶುದ್ಧ ಮಳ್ಳು !
ಸಿಟ್ಟಿಗೆದ್ದಿಹ ಅಜ್ಜಿ ಶಾಪ ಸುರಿಯುತ್ತಿಹಳು
" ನಿಮ್ಮೆದೆಗೆ ಕರುಳಿಲ್ಲ. ಮಣ್ಣು ಕಲ್ಲು."

ಮುಟ್ಟಬಹುದೇ ನಮಗೆ ಅವಳ ಶಾಪ ?
ತಟ್ಟಬಹುದೇ ಅವಳ ಕೊಂದ ಪಾಪ ?

ಇಂಗ್ಲಾಂಡಿಗೊಯ್ಯದೇ ಅವಳ ಕೊಂದಾ ಪಾಪ
ನಮಗೆ ತಟ್ಟಲಿ. ಪಾಪಕಿಂತ ಹೆಚ್ಚು
ಪುಣ್ಯಗಳಿಸಿಹೆವು ಮನೆಗಾಗಿ ಸಾವಿರ ಉಳಿಸಿ
ಹಿಡಿದಿಲ್ಲ ನಮಗೆ ಸಹ ಮುದಿಯ ಹುಚ್ಚು !

---

# ಬಾಡಿಗೆಯ ಭಟ

ಇಲ್ಲ ಎದುರು ಬಂದ ಹಗೆಯ
ಕೊಂದೆಬಿಡುವೆನೆಂಬ ಹಟ
ಇಲ್ಲ ಅವರ ಭೀತಿಯು
ನಾನು ಹಣಕೆ ದುಡಿವ ಭಟ
ಇಲ್ಲ ನನ್ನ ಬೆನ್ನಿಗಿರುವ
ಮಂದಿಯಲೂ ಪ್ರೀತಿಯು.

ನನಗಾಗಿಯೆ ತೆರೆಯ ಬಹುದು
ಸ್ವರ್ಗದಲ್ಲಿ ದಿಡ್ಡಿಯು.
ಈ ಬಣಗಳು ಗೆಲೆಯರಾದ-
ರೇನೂ ಇಲ್ಲ ಅಡ್ಡಿಯು
ಹರಿಯುತಿಹುದು ಹೊಸಾದಾಗಿ
ತೊಟ್ಟ ಹಳೇ ಚಡ್ಡಿಯು.

ಹಗೆಗಳೆಲ್ಲ ಒಬ್ಬರೊಬ್ಬ-
ರನ್ನು ತುಳಿದು ಮೆಟ್ಟಲಿ
ನಾನು ಬಚಾವಾಗುವಂಥ
ಯುಕ್ತಿಯೊಂದು ಹುಟ್ಟಲಿ
ನನ್ನ ಹೆಣವು ಬಿದ್ದರೂ
ಮನೆಗೆ ಹಣವು ಮುಟ್ಟಲಿ

ಪ್ರಾಮಾಣಿಕತನಕೆ ನೆಲದಿ
ಹುಟ್ಟದಿಂದು ಬಾಡಿಗೆ
ವೀರ ಶೂರ ಮಹಾಯೋಧ
ಎಂಬ ಹೆಸರು ಹೇಡಿಗೆ
ಓಂ ಶಾಂತಿ ಶಾಂತಿಯೆಂಬ
ಶಾಪ ಜಗದ ಕೇಡಿಗೆ

ಎಲ್ಲೆಲ್ಲೂ ಇಂಥ ಘಟನೆ
ಇಲ್ಲವೆನಿಸುವಂಥ ನಟನೆ
ಕಂಗೊಳಿಸಲಿ, ಮೆರೆಯಲಿ
ಇಂದು ಕೊಲೆ ಒಂದು ಕಲೆ
ಆಗಿರುವದು ಧರೆಯಲಿ
ಎಲ್ಲರು ಇದನರಿಯಲಿ

ನಾನು ಗೆದ್ದೆ ತೀರಬೇಕು
ಎಂಬುದಿಲ್ಲ ಕಾಯದೆ
ಹುರುಪಿನಿಂದ ಅರಿಯ ಕೊಂದ-
ರೇನು ಬಂತು ಘಾಯದೆ ?
ತೀರುವನಕ ವಾಯದೆ
ಉಳಿದರಾಯ್ತು ಸಾಯದೆ

# ಶುದ್ಧ ಪ್ರೀತಿ

ಅಂದು ಅವಳ ನೋಡಿದನು ನನ್ನ ಗೆಳೆಯ
ಚೆಂದ, ಪ್ರೀತಿ, ಆನಂದಯೆಂದು
ಹರಿಸಿದನು ಹುಚ್ಚುಹೊಳೆಯ.
ತನ್ನ ಮಡದಿಯನು ಮಾಡಿಕೊಂಡ ಇವಳ
ಒಮ್ಮೆ ನೋಡಿದನು ನನ್ನ ಗೆಳೆಯ
ರಾಣಿ-ಒಡತಿ-ಅರ್ಧಾಂಗಿಯೆಂದು ವೈ-
ಗಳಿಗೆ ಮದುವೆ ಮೊಳೆಯ
ಹೊಡೆದುಕೊಂಡ ಗೆಳೆಯ
ಇದೇ ಊರಿನಲಿ ನಾಳೆ
ಅಮರ ಅಪ್ಸರೆಯ ನೋಡೆ
ನನ್ನ ಗೆಳೆಯ
(ನೀ ಅಂಜಬೇಡ ನನ್ನ ಗೆಳೆಯುಗಾದವಳೆ)
ನಮಗೆಲ್ಲ ತೋರಿಸಿಯೆ ಬಿಡುವ ತನ್ನ ಶುದ್ಧ-
ಪ್ರೀತಿಯೆಂಬ ಕೊಳೆಯ !

---

# ಪತಿವ್ರತೆಯ ಚಿಂತೆ

ನಮ್ಮಮನೆ ಗಂಡಸರು ಮುಂಬೈಗೆ ಹೋಗಿಹರು
ಅವರು ಮರಳುವವರೆಗೆ ನನಗೆ ಚಿಂತೆ
ಮುಂಬೈಯು ಬಹು ದೊಡ್ಡ ನಗರವಾಗಿಹುವಂತೆ
ಸುಖವಾಗಿ ಬಂದಾರೆಯೆಂಬ ಚಿಂತೆ

ಎದ್ದ ಕೂಡಲೆ ಚಹವ ಸಿದ್ಧ ಮಾಡುವರಾರು ?
ಪಾಪ ಅಂಗಡಿವರೆಗೆ ನಡೆಯಬೇಕು
ಸ್ನಾನಕ್ಕೆ ಬಿಸಿನೀರು ಸಿಗುವದೋ ಇಲ್ಲವೋ
ಸರಿಯಾಗಿ ಮನೆಗೆ ಮರಳಿದರೆ ಸಾಕು

ಆವೂರಿನವರೆಲ್ಲ ಕಿಸೆಕತ್ತರಿಸುವವರು
ಇವರಾದರೋ ಬಹಳ ಸಭ್ಯ (=ಭೋಳೆ)
ಅಲ್ಲಿ ಸುಂದರ ಪುರುಷರನು ಬಲಾತ್ಕಾರವಲಿ
ಸೆಳೆದು ಕೊಳ್ಳುವಳಂತೆ ಕೆಟ್ಟ ಸೂಳೆ

ಬೀದಿಯಲಿ ಮೋಟಾರ ಕಾಟ ಬಹಳೇ ಅಂತೆ
ಅಪಘಾತವಾಗುವದೊ ಏನೊ ದೇವ
ಮುಂಬೈಗೆ ಹೋದವರು ಮರಳಿ ಬಂದರೆ ಸಾಕು
ತಳಮಳಿಸುತಿಹುದೆನ್ನ ಹೆಣ್ಣು ಜೀವ

---

# ಮಗಳನ್ನು ಗಂಡನ ಮನೆಗೆ ನೂಕುವಾಗ

" ಹೋಗಿಬಾ ಮಗಳೆ ಗಂಡನ ಮನೆಗೆ ಹರಸುವೆನು
ಬಾಳ್ ಸುಮಂಗಲೆಯಾಗಿ ದೀರ್ಘಕಾಲ
ತವರ ಹೆಸರನ್ನುಳಿಸು ಪತಿಯ ಪ್ರೀತಿಯ ಗಳಿಸು
ಮಾಡದಿರು ಮನಬಂದ ಹಾಗೆ ಸಾಲ

ಅತ್ತೆ-ಮಾವದಿರೊಡನೆ ಕೋಳಿ ಕಾಳೆಗ ಹೂಡಿ
ಮುಕ್ಕಟ್ಟಿಗೊಯ್ಯದಿರು ನಿನ್ನ ಪತಿಯ
ಪತಿಗೃಹದಿ ಮಾಡದಿರು ಎಂದೆಂದಿಗೂ ನೀನು
ನಿನ್ನ ತಾಯಿಯ ಬಳಗದವರ ಸ್ತುತಿಯ

ಕಾಲೇಜ ಚೆನ್ನೆಯರ ಕಂಡವನು ನಿನ್ನ ಪತಿ
ನೋಡಿಕೋ ಅವನ ಬಲು ಜೋಕೆಯಿಂದ
ಇಲ್ಲಿಯಂತೆಯೆ ಅಲ್ಲಿ ಕಂಡಕಂಡವರೊಡನೆ
ಸರಸವಾಡಲಿ ಬೇಡ ಮುದ್ದು ಕಂದ

ಮಗಳೆ ಸತ್ಯದ ಮಾತ ಹೇಳುವೆನು ತಿಳಿದುಕೋ
ಸರಿಯಾಗಿ ನೀನಿದರ ತಿರುಳು, ಮರ್ಮ
ಜಾಣ ಹೆಂಡತಿಯಿಂದ ಗಂಡನೆಷ್ಟೋ ಕೆಲಸ
ಸುಲಭ ! ಅಂತಹ ನಡತೆ ನಿನ್ನ ಧರ್ಮ

ಇದು ಮಹತ್ವದ ವಿಷಯ— ನಿನ್ನ ತಾಯಿಯ ಹಾಗೆ
ಹೆರಬೇಡ ಪ್ರತಿವರುಷ ಬಿಡದೆ ನೀನು
ಇನ್ನು ವರುವರುಷವೂ ದೇವರೇ ಕಳಿಸಿದರೆ
ಹೇಳಿರುವೆ ಮೊನ್ನೆ.... ನೆನಪಿಟ್ಟೆಯೇನು ?

ಸವತಿ ಬಂದರೆ ನಿನಗೆ ಒಂದು ವೇಳೆ
ಅವಳೊಡನೆ ಕಲಹವೇ ಬೇಡ ಬಾಲೆ

ಇಷ್ಟು ದಿನ ಸಾಕಿ ಸಲಹಿದೆ ನಿನ್ನ ಓ ಕರುಳೆ
ಇನ್ನು ಬೇರೆಯ ಕೈಗೆ ನೀಡಲೆಂತು ?
ದೈವೇಚ್ಛೆಯೇ ಹೀಗೆ; ನಾವೇನ ಮಾಡುವಮು
ಮಾನವನು ದೈವದಡಿ ಬಿದ್ದ ಜಂತು

" ಅಳಬೇಡ ತಂದೆ ನಾ ಹೋಗಿ ಬರುವೆ "
" ಹೋಗಿಬಾ ಮರೆಯದಿರು ನನ್ನ ಕರುವೇ "

× × ×

" ನಾಲ್ಕೈದರಲ್ಲೊಂದು ಪೀಡೆ ಕಳೆಯಿತು ಇಂದು
ಇಪ್ಪತ್ತು ವರುಷ ಈ ಜೀವ ತಿಂದು
ಅಪ್ಪಪ್ಪ ಗೆದ್ದೆ ! ಸತ್ತವಳ ಮಗಳೂ ಹೋಯ್ತು
ಉಳಿದ ಕೆಲಸವು ' ಅವಳ ' ಕರೆದು ತಂದು "

---

# ಕನ್ಯಾರತ್ನ

ನಮ್ಮೂರ ಜೋಯಿಸರಿಗೊಂದು ಕನ್ಯಾರತ್ನ
ಅವಳ ಮದುವೆಗೆ ಮಾಡುತಿಹರು ಯತ್ನ.

ಕನ್ನೆ ಕಲಿತವಳಲ್ಲ ಆದರೂ ಬಲುಚೆದುರೆ
ಮನೆಗೆಲಸದಲ್ಲಂತು ಬಹಳ ಜಾಣೆ
ಜೋಯಿಸರ ಮುಖದಿಂದಲೇವರ್ಣನೆಯ ಕೇಳಿ
“ ನನ್ನ ಮಗಳಂಥವಳ ಬೇರೆ ಕಾಣೆ ”

ನಾನಾದೆಗೊಮ್ಮೆ ಆ ರತ್ನ-ಜ್ಯೋತಿ-ಪತಂಗ
ವಧುಪರೀಕ್ಷೆಯ ಮೇಜವಾನಿ ಉಂಡೆ
ಸ್ವತಃ ಕಜ್ಜಾಯಗಳ ಬಡಿಸ ಬಂದಾ ಹೆಣ್ಣ
ಅನ್ನ ಕಲಿಸುವುದನೇ ಬಿಟ್ಟು ಕಂಡೆ.

ಅವಳ ಮೊಗದಲಿ ಮೊಳೆತ ಮೀಸೆಗಳನಾದರೂ
ಅವಳ ಸದ್ಗುಣದಿಂದ ತಳ್ಳಬಹುದು
ಅವಳನಪ್ಪುವ ನನ್ನ ತೋಳು ತುಸು ಕುಳ್ಳವೇ
ಆದರೂ ಎಳೆದೆಳೆದು ಕೊಳ್ಳಬಹುದು

ಎಂದೆಲ್ಲ ಯೋಚಿಸುವ ನನ್ನ ಮೆದುಳಿನ ಮೇಲೆ
ಕರ್ಣದ್ವಾರಗಳಲ್ಲಿ ನುಗ್ಗಿ ಬಂದು
ಆ ಕೋಗಿಲೆಯ ಕುಕಿಲು ಆಘಾತಿಸಿದರೂನು
ಬದುಕೆಂತು ಬಂದೆನೋ ಕೂಳುತಿಂದು !

ಇಂದಿಗೂ ಜೋಯಿಸರ ಮಗಳು ಕನ್ಯಾರತ್ನ
ಮಾಡಿ ಸೀವೊಮ್ಮೆ ಅದ ಪಡೆವ ಯತ್ನ

———— ——

# ಮಿಸ್ ಮೇಯೋ ಮತ್ತು ನಾನು

'ಮೇಯೋ' ಎಂಬ ಹೆಣ್ಣು ಮತ್ತೆ
ಬಂದಳು ಈ ದೇಶಕೆ
ಸಹಜವಾಗಿ ಸೋತೆ ನಾನು
ಅವಳ ರೂಪ ವೇಷಕೆ

ಅವಳ ನನ್ನ ನಡುವೆಯೇನೋ
ನಡೆದು ನಮ್ಮ ಭ್ರೂಕುಟಿ
ಅಂಕ ಡೊಂಕ ಕೊಂಕಿ ಸೋಂಕಿ
ಅಂಟಿಕೊಂಡು ಕೆಂದುಟಿ—

ನಿಂತ ವೇಳೆ ನೆನಪಾಯಿತು
ಅವಳು ಬರೆದ ಪುಸ್ತಕ
ನಿಮಿಷದಲ್ಲಿ ಸಲೆ ಕಾಯಿತು
ನನ್ನ ಹಾಳು ಮಸ್ತಕ

ಅವಳ ಪಕ್ಕ ಮುರಿಯುವಂತೆ
ತುಟಿ—ಗಲ್ಲವು—ಹರಿಯುವಂತೆ
ಅಪ್ಪಿ ಮುದ್ದನಿತ್ತೆನು
ಬವಳಿ ಬಂದು ಬೀಳಲವಳು
ನಾನು ಕಾಲು ಕಿತ್ತೆನು
ಪಾಪ ಹೆಣ್ಣು ಎಂದು ಮರಳಿ
ಬಂದು ಹೆಣವ ಹೊತ್ತೆನು
ಚಿತೆಯ ವೆಚ್ಚ ತೆತ್ತೆನು

---

## ದಿವ್ಯಾಂಶದ ತೂಕ

ಈ ಪ್ರಪಂಚವನು ಪ್ರೇಮವು ನಡಿಸಿದೆ
ಬೇರು ಬಿಟ್ಟು ಅದು ಎಲ್ಲಕಡೆ
ಇಹುದು ಒಂದು ಮಣ ಶುದ್ಧ ಪ್ರೇಮದಲಿ
ದಿವ್ಯಾಂಶವು ಕೇಳ್ ಮೂರು ಧಡೆ

ಶುದ್ಧ ಪ್ರಣಯವದು ಶುದ್ಧ ಪ್ರೇಮಗಳ
ಗೊನೆಯು ಎನ್ನಲಿಕೆ ಯಾರ ಭಿಡೆ ?
ಶುದ್ಧ ಒಂದು ಮಣ ಪ್ರಣಯದಲ್ಲಿ ಇದೆ
ದಿವ್ಯಾಂಶವು ತಿಳಿ ನಾಲ್ಕು ಧಡೆ

ಶುದ್ಧ ಪ್ರೇಮಕೂ ಶುದ್ಧ ಪ್ರಣಯಕೂ
ವ್ಯತ್ಯಾಸವುಯೇಕೊಂದು ಧಡೆ ?
ದಿವ್ಯಾಂಶದ ಆ ಒಂದು ಧಡೆ
ಅದರ ಕಾರಣವು ರಕ್ತಮಾಂಸಗಳ
ಕಣ್ಣು ಕೊರಳು ತುಟಿ ತೋಳು ತೊಡೆ !

---

# ಭಟ್ಟಿ ಇಳಿಸಿದ ಪ್ರೇಮ

ಸೂಳೆ ದೇಹದಲಿ ಸೋಸಿ ಹೋಯಿತೋ
ಅವನ ಕೆಟ್ಟ ಕಾಮ
ಮಡದಿಗಾಗಿಯೇ ತಂದ ಭಟ್ಟಿ ಇಳಿ-
ಸಿರುವ ಶುದ್ಧ ಪ್ರೇಮ !

---

## ಸೀತಾಪರಿತ್ಯಾಗ

ಪತಿಯ ಮನದಿ ಬೆಳೆಯೆ ಸವತಿ
ತನ್ನ ಬಸಿರ ಜೋಡಿಗೆ
ಪತಿಯ ಬೆನ್ನು
ಬಿಡದ ಹೆಣ್ಣು
ಹೋಗಬೇಕು ಕಾಡಿಗೆ !

---

# ಸುಖ

" ಅಂದಿನ ಆವ್ರೋರಿ ನೋಟ
ಕಳ್ಳಮಾತು, ಇರುಳ ಕೂಟ
ಸಿರಿವಂತಿಕೆ, ತಾಯ್ತನ
ಎಲ್ಲವನೂ ಮೀರುವಂಥ
ಸುಖವು ಈಗ ನನಗೆ " ಎಂತ
ಹೇಳಿ ಮುದುಕಿ ಆತನ—

ಸೋತ ಎಡದ ಕೈಯ ಬಡವ
ನೆಲದ ಮೇಲೆ ಇಟ್ಟನು
ಬಲದ ಕೈಯ ಉಗುರಿನಿಂದ
ಬೆನ್ನು ತುರಿಸಿ ಕೊಟ್ಟನು !

---

# ಪೂರ್ಣ

ಗಂಡಿಗಿರುವುದೆರಡು ಕಾಲು
ಹೆಣ್ಣಿಗೆ ಸಹ ಎರಡೆ ಕಾಲು
ಇಲ್ಲ ಇದಕೆ ವಾದವು
ಇವರು ಅರ್ಧ— ಹೋಳು ಹೋಳು
ಕೂಟದಿಂದ ಮಾತ್ರ ಬಾಳು
ಪೂರ್ಣವೆಂದು ವೇದವು
ಸಾರುತಿರಲು ಕೇಳಿ “ ಹಹಾ !
ಪೂರ್ಣ ಪೂರ್ಣ ನಾನು ಸಹಾ
ನನಗೆ ಕಾಲು ನಾಲ್ಕು ” ಎಂದು
ವೇದಗಳನು ಮೂಸಿ, ಮೆಂದು
ಬಂತು ಚತುಷ್ಪಾದವು !

---

# ಇಹ : ಪರ

ಪರದ ಚೆಲುವು ಶಾಶ್ವತತ್ವ
ಇಲ್ಲ ಇಹದ ಮಣ್ಣಿಗೆ
ಮನವ ಸೆಳೆವ ಶಕ್ತಿ ಸಹಜ
ಆಚೆ ಕೇರಿ ಹೆಣ್ಣಿಗೆ
ಆಚೆಯಿಂದ ಅಂಟಿಬಂದ
ರೋಗ ನಮ್ಮ ಕಣ್ಣಿಗೆ

---

# ಮಾಯಾದೇವಿ

ಒಮಕು ಮಾಯೆಯುಡಿಗೆ ಗಂಟು
ಬಿಡಿಸಲಾರ ಒಬ್ಬನೂ
ಗೆಳೆಯ ನಷ್ಟೆ
ಅವನ ಕಡ
ಹಾರಿಸಿ ಕುಡಿ ಹುಬ್ಬನು

---

# ಗುಹ್ಯಂ

ಬಿಗೀ ಬಿಗೀ ಬಿಗಿದಳೋ
ಅವಳು ಎದೆಗೆ ಕುಪ್ಪುಸ
“ ಅಂತೆಯೋನೊ, ಆದರೂನೊ
ಕೆಟ್ಟಿತವಳ ಪುಪ್ಪುಸ

---

# ಪ್ರೀತಿ

ಮೊದಲ ಹೆಣ್ಣು ಮೊದಲ ಗಂಡು
ಒಬ್ಬರೊಬ್ಬರನ್ನು ಕಂಡು
ಮೈಗೆ ಮೈಗೆ ಮೋಹಗೊಂಡು
ಕೂಡಿ ಕುಣಿದರು

ಹೀಗೆ ದಿನವು ಸಾಗುತ್ತಿತ್ತು
ನಲ ತುಂಬಿತು ಅವರು ಹೆತ್ತು
ಹೆತ್ತು ಸೋತು ಹೆಣವು ಬಿತ್ತು
ಕೊನೆಗೆ ಪ್ರೀತಿಯೆಂಬ ಮದ್ದು
ಅರೆದು ತಣಿದರು

---

# ಮನ : ಹಣ

ಅವಳ ಹೊಳೆವ ಕಣ್ಣಿನಿಂದ
ಇಂದಿನವರೆಗೆನಗೆ ಬಂದ
ಹಾನಿ ಹೇಳತೀರದು
ಅವಳ ಹಿಂದೆ ಹೋದ ಮನವು
ತಿರುಗಿ ಬಂತು. ಕಳೆದ ಹಣವು
ಮಾತ್ರ ಮರಳಿಬಾರದು

---

# ಹಾಲು

ಮನೆಯಲೂ ನೆರೆಯಲೂ ಹಾಲಿಲ್ಲವೆಂದರೂ
ಗಂಡ ಒದರಿದ : ಬೇಕೆಬೇಕು ಕಾಫಿ
ಎಂತೆಂತೊ ಮಾಡಿದಳು ಕಾಫಿಯನು ಮಗು ಅತ್ತು
" ಹಾಲಿಲ್ಲ " ಅಂದಿತ್ತು ಮೊಲೆಯ ಸೀಪಿ

---

# ಪಿಂಡ

ಹೊಸ ಸಂಸಾರವ ಹೂಡಿದ ನಗರದಿ
ಆತನು ರೇಶನ್ ಕಾಲದಲಿ
ಮಗನ ವೈಭವವ ನೋಡಲು ಬಂದರು
ತಂದೆ ತಾಯಿಗಳು ಮೇಳದಲಿ

ಎರಡೇ ದಿವಸದಿ ತೀರಿತು ಆತನ
ಶುಕ್ಲಪಕ್ಷ ರೇಶನ್ ಕೋಟಾ
ಸ್ಪೇಲೀಸರ ನೆರವಿದ್ದೂ ಕೆಟ್ಟಿತು
ಕೃಷ್ಣ ಪೇಟೆಗಳ ತಿರುಗಾಟ

ಪುತ್ರನ ಪೇಚನು ಊಹಿಸಿ ಪಿತೃಗಳು
ಹಸಿದೇ ಊರಿಗೆ ಮರಳಿದರು
ತಮಗೆ ಪಿಂಡಗಳು ಎಂತೋ ಎನ್ನುತ
ಸಾಯುವ ಮುಂಚೇ ನರಳಿದರು

---

# ನಿಸರ್ಗದ ನಡುವೆ

ಸುತ್ತು ಪೇಟೆಯ ಹಿಂಡು
ನಡುವಿಹುದು ಹುಂಜ
ಹೇಸಿ ಪೇಟೆಗಳೆಲ್ಲ
ಹುಂಜಕ್ಕೆ ಚೆಂದ

ಈ ನಿಸರ್ಗದ ಚೆಲುವು
ನನಗೆಲ್ಲ ಚೆಂದ
ಸುತ್ತಲೂ ಪೇಟೆಗಳು
ನಡುವೆ ನಾ ಹುಂಜ !

———— ——

# ಬಚ್ಚಲಲ್ಲಿ

ತಿರಿಯ ತೆರವುಗಳ ತುಂಬಿತು ಬೆಳಗು
ಹೊಂಗದಿರಿಣಿಕಿತು ಬಚ್ಚಲಿನೊಳಗೂ
ಒಣ್ಣಿಸಲೆಂತು ?
ಗಂಡಸು ನಿಂತು
ಹರಿಸಿರೆ ದೇಹದ ಮಲಿನ ಜಲ—

ಸೇರುವ ಹನಿಯಲಿ ಕಾಮನ ಬಿಲ್ಲು !
ತಾಜ ಮಹಲವೊಲು ಬಚ್ಚಲ ಕಲ್ಲು ! !
ಬಚ್ಚಲು, ಬಾನು
ಎನ್ನುವುದೇನೂ
ಭೇದವೆ ಚೆಲುವಿಗೆ ಇಲ್ಲವಲಾ !
ಬಾನಿನ ಬಿಂಬವು ನಮ್ಮ ನೆಲ

---

# ಉಗ್ರೋಪಾಸನೆ

ಹೆಂಡತಿಯ ಗುಣುಗುಣೂ
ಜೋಗುಳವ ಕೇಳಿ
ಆರಾಧ್ಯ ದೇವತೆಯ
ಅವತಾರ ತಾಳಿ
ಗುಡುಗಿದನು ವೆಂಕಪ್ಪ
" ಸುಮ್ಮನಿರು ರಂಡೆ "
ವೆಂಕನ ಉಪಾಸನೆಗೆ
ಕಿರುದನಿಯ ವಾಸನೆಯೆ
ಹತ್ತಬಾರದುಯೆಂಬ
ಸತ್ಯ ತಿಳಕೊಂಡೆ !

---

## ಪಶುಜೀವನ

ಚಿನ್ನಾಟದ ಕುನ್ನಿಗಳನು ಕಂಡೆ
ಕಚ್ಚಾಡುವವೆಂದೇ ತಿಳಕೊಂಡೆ
ತಪ್ಪೇ ತಿಳಕೊಂಡೆ
ಪಂಗಡ ಪಂಗಡಗಳ ನಾಯಕರು
ನಸು ನಕ್ಕರು ಕೈಕೈ ಕುಲುಕಿ
ಅಗಲಿದ ಗೆಳೆಯರು ಕೂಡಿದರೆಂದು
ಸುಳ್ಳೇ ನಂಬಿದೆ ನಾನಂದು

---

## ಉಂಗುರ

ಮನುಜಾ ಈ ದೇಹವು
    ಕ್ಷಣಭಂಗುರ
ಅಂತೆಯೆ ಬೆರಳಿಗೆ
    ನೀನೊಂದುಂಗುರ
ಧರಿಸಿರು; ಅದು ನಿನಗಾಧಾರ
    ನೀನೆಲ್ಲಾದರೂ
ಬಿದ್ದರೆ ಸತ್ತು
    ಉಂಗುರ ಕಟ್ಟಿಗೆ
ವೆಚ್ಚವ ಹೊತ್ತು
    ಮಾಡಿಸುವದು ಶವಸಂಸ್ಕಾರ !

---

# ಸಾಮುದ್ರಿಕ

ಜೋಯಿಸನ ಪತಿಯೆದುರು ಕರೆದಳು
ಅವನ ಕಲಿತ ಮನೋರಮೆ
ಪತಿಯ ಅಂಗೈ ಗೆರೆಯ ತಿಳಿದು
ತನ್ನ ದುರ್ಭಾಗ್ಯವನು ಹಳಿದು
ಮರುದಿನವೆ ತೆಗೆಯಿಸಿದಳಾತನ
ಇದೆ ಇದೇ ಜೀವನ ವಿಮೆ !

---

# ಆಕಾಶಗಂಗೆಗೆ

ಕವಿಗಳ ಹಿಂಡೇ ಕರೆದಿದೆ ನಿನ್ನನು
ಭೂಮಿಗೆ ಓ ಗಂಗೆ
ಇಳೆಗಿಳಿಯುವಹುಲು ಯೋಚನೆಗಳ ಬಿಡು
ಮಾಡಿದರೂ ದಂಗೆ.

ದ್ರೋಹಿಯು ಎಂದೇ ಕರೆಯಲಿ ನನ್ನನು
ಸತ್ಯವ ಸಾರುವೆನು
ಗುಟ್ಟನು ಹೇಳುವೆ. ಯೋಚಿಸು, ನಿನ್ನದೆ
ಹಿತವನು ಕೋರುವೆನು.

ಭೂಮಿಗೆ ಬಂದರೆ ನಿನಗೇ ತೊಂದರೆ
ಆಗುವೆ ನೀ ರಾಡಿ
ನಿಟ್ಟುಸುರಿನ ಹೊಗೆ ತೋರಿಕೆಗಳ ನಗೆ
ಗಟಾರಗಳ ಕೋಡಿ—

ಭಂಗಿನಿಕೆಲಸಕೆ ನಿನ್ನನು ಹಚ್ಚದೆ
ಬಿಟ್ಟರೆ ನನ್ನಾಣೆ
ಅರ್ಥಾತೊಲೆ ನಿನಗಿದ್ದರೆ ಬುದ್ಧಿಯು
ಬಳಸಿಕೊ ಅದ ಜಾಣೆ.

ಭೂಮಿಯ ಒಳಿತನು ಬಗೆದರೆ ಮಾನವ
ಆತಗೆ ನಿನ್ ಹಂಗೇ?
ಸುಲಭದಿ ನಿನ್ನನು ಭಂಗಿಸಲೇ ಈ
ಭಕ್ತಿಯ ಬಲೆ ಗಂಗೆ.

ನಾಶದಿ ಪಳಗಿದ ಕೈಗಳ ಮಾನವ
ಲೇಸಿಗೆ ತಂತಾನೇ
ದುಡುಕಲಿ ಯುಕ್ತಿಯ ಹುಡುಕಲಿ ನೆಲದಲಿ
ಬಂದುದು ನಿನಗೇನೇ ?

ಕೆಲಸಕೆ ಬಾರದ ಕವಿಗಳು ಕೆಲವರು
ಕರೆಯುತ್ತಿಹರೆಂದು
ಭೂಮಿಗೆ ಬಹುಮತವಿಲ್ಲದೆ ಬಂದರೆ
ನಿನಗೇನೇ ಕುಂದು.

ಭೂಮಿಯ ತೊಳೆಯುವ ಭಂಗಿನಿಯಾಗುವೆ
ನೀ ಇಳಿದರೆ ನೆಲಕೆ
ತರುವೆ ತೊಂದರೆಯ ಪ್ರಯೋಗ ನಡೆಸಿಹ
ನರಬುದ್ಧಿಯ ಬಲಕೆ

ಭೂಮಿಗೆ ಇಳಿದೇ ಬಿಡಬೇಕೆಂದರೆ
ಅದಕೊಂದಿದೆ ವೇಳೆ
ಮುಗಿಯಲಿ ಭೂಮಿಯ ಮೈಮೇಲೆಲ್ಲಾ
ಯಮರಾಯನ ಲೀಲೆ.

ಒಂದೂ ಹದ್ದೂ ಕಾಗೆಯು ಹಾರದೆ
ಭೂಮಿಯೆ ಬಿದ್ದಾಗ
ಕವಿಗಳು ಯಾರೂ ಕರೆಯುವದಿಲ್ಲ
ಬಾ ನೀ ಎದ್ದಾಗ
ಅಲ್ಲಿಯವರೆಗೂ ಕವಿಗಳ ಕರೆಯನು
ಕೇಳಿದರೆನ್ನಾಣೆ
ಅರ್ಥಾತೊಲೆ ನಿನಗಿದ್ದರೆ ಬುದ್ಧಿಯು
ಬಳಸಿಕೊ ಅದ ಜಾಣೆ.

# ಆತ್ಮಶೋಧನೆ

ಹುಡುಕಿದೆ ಹಗಲೆಲ್ಲಾ
ಎಲ್ಲೂ ಸಿಗಲಿಲ್ಲ
ಹಳಬರು ಹೇಳಿದ ಆತ್ಮವು ನನಗೆ
ಎಲ್ಲೂ ಸಿಗಲಿಲ್ಲ.

ಗುಡಿಯಲಿ ಬರಿಕಲ್ಲು
ವೇದ ಪುರಾಣದ ಪೀಠದ ಮೇಲೆ
ಬೆಳೆದಿದೆ ಒಣಹುಲ್ಲು

ಹುಡುಕಿದೆ ಮಗುವಿನ ಕಣ್ಣಿನಲಿ
ಮಸಣದ ಮಣ್ಣಿನಲಿ
ಸಿಗಲಿಲ್ಲ.
ಪರಿಕಿಸಿದೆನು ಚೆಲುವಿನ ಕೆನ್ನೆ
ಒಳಗಡೆ ಬರಿ ಸೊನ್ನೆ

ಹಾರಿದೆ ಕಣ್ಣೀರಿನ ತಳಕೆ
ಕೇಸುರಿಗಳ ಜೋಲೆಯ ಝಳಕೆ
ಅಲ್ಲಿ
ಹೆಣವೂ ಸಿಗಲಿಲ್ಲ
ಆತ್ಮದ
ಕಣವೂ ಸಿಗಲಿಲ್ಲ.

ಮತ್ತೆಲ್ಲೆಲ್ಲೋ ಹುಡುಕೇ ಹುಡುಕಿದೆ
ಆತ್ಮವು ಸಿಗಲಿಲ್ಲ.

ಪುಣ್ಯಕೆ
ಹುಚ್ಚಲೆದಾಡುವ ನನ್ನನು ನೋಡಿ
ಯಾರೂ ನಗಲಿಲ್ಲ !

ಬಳಲುತ ಬರುತಿರಲಾ ಸಂಜೆ
ಯತಿಯೊಬ್ಬನ ಕಂಡೆ

ಆತ್ಮದ ಶೋಧನ ಕತೆಯನು ಕೇಳಿ
ಯತಿ ಗಹಗಹಿಸಿದನು
ಹೇಳಿದ ಕೊನೆಗೆ
" ನಡೆ ಮನೆಗೆ—
ಕಾಣುವೆ ಆತ್ಮನ ಮನೆಯಲ್ಲೇ "
ಅನಿಸಿತು: ಅಲೆದಾಡಿದೆ ಸುಳ್ಳೇ.

ಮನೆಯಲಿ ಮಂಚದ ಮೇಲೊರಗಿ
ಆತ್ಮವ ಕಾಣದೆಯೇ ಕೊರಗಿ
ಏನೂ ತಿಳಿಯದೆ ಕುಳಿತಿರಲಾರೋ
ಕರೆದರು. ನೋಡಿದೆ ಹಿಂತಿರುಗಿ
ಯಾರೂ ಇದ್ದಿಲ್ಲ
ನನ್ನುಸಿರಿನ ಸದ್ದಿಲ್ಲ.

ಆ ಕರೆಬಂತು.
ತಡೆಯುವದೆಂತು ?
ಕರೆಯನು ಹಿಂಬಾಲಿಸಿ ನಡೆದೆ.
ದೊಡ್ಡ ಕಪಾಟಿನ ಬಳಿ ತಡೆದೆ.
ಅದರೊಳಗಿಂದ
" ಬಾ ಬಾ ಕಂದ "

## ಆತ್ಮಶೋಧನೆ

ಎಂದೆನ್ನಾರೋ ಕರೆಕರೆಯೆ
ಗುರುತಿಸಿ ಆ ಹೊತ್ತಿಗೆ ತೆರೆಯೆ
ಅದರೊಳಗಿಂದ
“ ಇದೊ ಇದೊ ಕಂದ
ನಾನಿಹೆನಿಲ್ಲಿ
ಹುಡುಕುವೆ ನೀನೆಲ್ಲಿ ?”

ಸಿಕ್ಕಿತು ! ಸಿಕ್ಕಿತು !
ಆತ್ಮವು ನಕ್ಕಿತು
ಕಿಟ್ಟೆಲ ಕೋಶದ ನೂರಾ ಐವತ್
ಮೂರನೆ ಪುಟದಲ್ಲಿ
ಹರಿ ಓಂ ಹರ ಓಂ ಹರಿಹರಓಂ ಸತ್
ಆತ್ಮವು ಇನ್ನೆಲ್ಲಿ ?
ಹಳಬರು ಹೇಳಿದ
ಆತ್ಮವು ಇನ್ನೆಲ್ಲಿ ?

---



11

# ಹರಕೆ

ಓಂ ಓಂ ಸತ್ ಹೀಗಾಗಲಿ
ಲೋಕದೆಲ್ಲ ಮನೆಯಲಿ
ಓಃ ದೇವ ವಿಶ್ವವೆಲ್ಲ
ನಿನ್ನ ಬಿಡದೆ ನೆನೆಯಲಿ !

ಒಲೆಯ ಮೇಲೆ ಇಟ್ಟ ಹಾಲು
ಕಾದು ಕೆನೆಯು ಕೂಡಲಿ
ಅದಕೆ ಹೆಣ್ಣು ಹೆಪ್ಪುಹಾಕೆ
ಗಟ್ಟಿ ಮೊಸರು ಮೂಡಲಿ

ಮೊಸರ ಕಡೆಯೆ ಬೆಣ್ಣೆ ಮುದ್ದೆ
ಮಜ್ಜಿಗೆ ಸಹ ಹೊರಡಲಿ
ಬೆಣ್ಣೆ ಕಾಸಿ ಇಟ್ಟ ಮೇಲೆ
ತುಪ್ಪದ ಹೆರೆ ಹರಡಲಿ

ಇಂಥ ಒಳ್ಳೆ ತುಪ್ಪದಲ್ಲಿ
ಸಂಡಿಗೆಯನು ಕರಿಯಲಿ
(ಕರಿಯುವವಳು ಕೆಮ್ಮಲಿ
ಸಂತಸವೂ ಹೊಮ್ಮಲಿ)
ಹಾಲುಹಳ್ಳ ಹರಿಯಲಿ
ಬೆಣ್ಣೆಬಂಡೆ ಝುರಿಯಲಿ

ಓಂ ಓಂ ಸತ್ ಹೀಗಾಗಲಿ
ಲೋಕದೆಲ್ಲ ಮನೆಯಲಿ

# ಆತ್ಮಶೋಧನೆ

ಓ ದೇವ ವಿಶ್ವವೆಲ್ಲ
ನಿನ್ನ ಬಿಡದೆ ನೆನೆಯಲಿ

ಮೇಲೆ ಹೇಳಿದಂಥ ತಪ್ಪು
ಗಂಡಸರೂ ತಿನ್ನಲಿ
ಪರಮಾತ್ಮನ ಕರುಣೆಯಿಂದು
ಭಕ್ತಿಯಿಂದೆ ಅನ್ನಲಿ

ಮನುವಿನ ಹೆಣ್ಮಕ್ಕಳೆಲ್ಲ
ಹೆರಲಿ ದಿವಸ ತುಂಬಲು
ಹುಟ್ಟಿದೊಡನೆ ತಮ್ಮ ಮಗುವ
ನೋಡಿ, ಜೀರಿ ಬರಲಿ ನಗುವ
ತಂದೆಯಾದ ಗಂಡು ತನ್ನ
ಪೌರುಷವನು ನಂಬಲು

ಗಂಡು ಹೆಣ್ಣು ಬಾಳಲಿ
ಪ್ರೀತಿ ರಾಜ್ಯವಾಳಲಿ.

ಸೂರ್ಯಚಂದ್ರರೆಲ್ಲ ತಮ್ಮ
ಕೆಲಸ ಬಿಡದೆ ಮಾಡಲಿ
ಪರಮಾತ್ಮನು-ಸಾಕ್ಷಿಯಾಗಿ
ಜಗವನೆಲ್ಲ ನೋಡಲಿ.

ಜನರೆನ್ನಲಿ " ದೇವ ನಿನ್ನ
ಶಿಶುವು ನಾವು ಕಂಡೆಯಾ "
ಅವನು ಆಕಳಿಸಿದಾಗ
ಚಿಪುಟಿ ಬಿಡಲಿ ಕುಂಡೆಯ !

ಸಿರಿವಂತಗೆ ಸೂಳೆಯಂತೆ
ಬಾಳು ಸುಲಭವಾಗಲಿ
ಓಂ ಶಾಂತಿ ಓಂ ಶಾಂತಿ
ಎಂಬ ಮಂತ್ರ ನಾಗಲಿ.

ಮಾನವಕುಲ ಹಗಲಿರುಳೂ
ಜೀವಗತಿಯ ಚಿಂತಿಸಿ
ಆ ಚಿತ್ಸುಖ ಸಾಗರದಲಿ
ಬೆಂದ ಬಾಳ ಕಂತಿಸಿ

ಪರಂಜ್ಯೋತಿ ಬೆಳಕಿನಲ್ಲಿ
ಕೈವಲ್ಯವ ಕಾಣಲಿ
ಓಂ ಬ್ರಹ್ಮ ಪರಬ್ರಹ್ಮ
ಅಂತು ಇಂತು ಈ ನಮ್ಮ
ಮಣ್ಣ–ಬಾಳು ಮಾಣಲಿ
ಅಥವ ಮೂಡಿ ಬರಲಿ ಬೇಗ
ಕೋಡು ಜನರ ಗೋಣಲಿ !

---

# ಪರ್ಣಕುಟಿ ಗ್ರಂಥಮಾಲೆ, ಧಾರವಾಡ

## ಈ ವರೆಗಿನ ಪ್ರಕಟನೆಗಳು :

೧ ಪ್ರಪಂಚದ ಕತೆಗಳು ೦-೧೫-೦
ಹೆಗಡೆ ಬಂಧುಗಳು

೨ ಶ್ರೀನಾಥ (ಸಾಮಾಜಿಕ ಕಾದಂಬರಿ) ೦-೧೫-೦
ಪಂ. ವಿಶ್ವೇಶ್ವರಶರ್ಮಾ

೩ ಕಾಂಚನಮೃಗ ೨-೦-೦
ಶ್ರೀ. ವಿ. ಸ. ಖಾಂಡೇಕರರ ಸಾಮಾಜಿಕ ಕಾದಂಬರಿ
ಅನುವಾದಕರು: ಪಾಂ. ದ. ಶಹಾಣೆ

೪ ರಕ್ತಸರೋವರ (ವಾಸ್ತವ ಕತೆಗಳು) ೧-೪-೦
ಕುಳಕುಂದ ಶಿವರಾಯ

೫ ಸಹ್ಯಾದ್ರಿ (ಉತ್ತರ ಕನ್ನಡದ ಜೀವನ ಚಿತ್ರಗಳು) ೧-೪-೦
ವಿ. ಜಿ. ಭಟ್ಟ

೬ ಗಂಡು ಹೆಣ್ಣು (ಪ್ರಬಂಧ) ೧-೮-೦
ಗೌರೀಶ ಕಾಯ್ಕಿಣಿ

೭ ಅವರು ಮತ್ತು ದೇವಕ್ಕ (ಎರಡು ನೀಳ್ಗತೆಗಳು) ೧-೮-೦
ಐರಣಿ ಶ್ರೀನಿವಾಸ

೮ ಉತ್ತರ ಕನ್ನಡದ ಜೀವನ ಚಿತ್ರಗಳು ೧-೮-೦
ವಿ. ಜಿ. ಭಟ್ಟ

೯ ವಕ್ರದೃಷ್ಟಿ (ಜಡ ಹರಟೆಗಳು) ೧-೦-೦
ಕೆ. ಟಿ. ದೇಶಪಾಂಡೆ

೧೦ ವಿಜಯ ಯಾತ್ರೆ (ರಾಜಕೀಯ ಕಾದಂಬರಿ) ೨-೦-೦
ವಿ. ಎಂ ಇನಾಂದಾರ

೧೧ ಹುಟ್ಟದಿದ್ದವನ ಖೂನಿ ಮತ್ತು ಇತರ ಚತುರಕತೆಗಳು ೧-೦-೦
ಶಂಗರಾವ ತಲಚೇರಿಕರ

೧೨ ಏಕೀಕರಣವು ಅರಾಷ್ಟ್ರೀಯವೆ ? ೧-೦-೦
ಶ್ರೀ. ಉರವಕೊಂಡ ಜಗದ್ಗುರುಗಳು

೧೩ ಪ್ರೀತಿ ೧—೪—೦
ಗೌರೀಶ ಕಾಯ್ಕಿಣಿ

೧೪ ಯಕ್ಷನಾಟಕಗಳು ೨—೦—೦
ರಾಮಚಂದ್ರಭಟ್ಟ, ಹಾಸಣಗಿ

೧೫ ಬುರುಕಿ (ಲಘುಕತೆಗಳು) ೦—೧೨—೦
ವಿ. ಜಿ. ಭಟ್ಟ

೧೬ ಯಕ್ಷಪ್ರಶ್ನೆ ಅಥವಾ ಬರಲಿರುವ ಸಮಾಜ ೩—೦—೦
ಶಂ. ಬಾ. ಜೋಶಿ

೧೭ ಪಡುವಣ (ಉತ್ತರ ಕನ್ನಡದ ಚಿತ್ರಗಳು) ೦—೧೦—೦
ಪ. ಸು. ಭಟ್ಟ

೧೮ ಚುಟುಕ (ಮಕ್ಕಳ ಕವನ ಸಂಗ್ರಹ) ೧—೮—೦
ವಿ. ಜಿ. ಭಟ್ಟ

೧೯ ಔದ್ಯೋಗಿಕ ಸಹಕಾರ ೨—೦—೦
ಎಸ್. ಕೆ. ಕಲ್ಲಾಪೂರ

೨೦ ಉತ್ತರ ಕನ್ನಡದ ಪದಗಳು ೧—೪—೦
ಮ. ಗ. ಶೆಟ್ಟಿ

೨೧ ಪಲಾಯಣ (ಲಲಿತ ಕವನಗಳು) ೧—೪—೦
ವಿ. ಜಿ. ಭಟ್ಟ

೨೨ ರಕ್ತಾಂಜಲಿ (ರುದ್ರಗೀತಗಳು) ೧—೦—೦
ವಿ. ಜಿ. ಭಟ್ಟ

೨೩ ಕಾಲದ ಕರೆ (ಕವನಗಳು) ೧—೦—೦
ಜಿ. ವಿ. ಚಿತ್ತಾಲ

೨೪ ಕಾವ್ಯವೇದನೆ ೧—೮—೦
( ಪ್ರೇಮಾರಾಧನೆ ಮತ್ತು ಆತ್ಮಶೋಧನೆ )
ವಿ. ಜಿ. ಭಟ್ಟ

**ಇದೇ ಲೇಖಕರಿಂದ**

ಪಲಾಯನ

ರಕ್ತಾಂಜಲಿ

ಸಹ್ಯಾದ್ರಿ

ಉತ್ತರ ಕನ್ನಡದ ಜೀವನ ಚಿತ್ರಗಳು

ಬುರುಕಿ

ಎಪ್ಪ ಕತೆಗಳು

ಚುಟಕ